# ಅಚಲ

ತಿಂಗಳ ಪತ್ರಿಕೆ

ಜನವರಿ - 2003

10

## ಒಳಗೇನಿದೆ






ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಬೆಂಗಳೂರು

# ಅಚಲ

ಸಂಪುಟ - 18 ಸಂಚಿಕೆ : 1

ಸಂಪಾದಕ ಮಂಡಲಿ

ಎನ್. ಗಾಯತ್ರಿ

ನೇಮಿಚಂದ್ರ, ದೇವಿ,

ಬಿ. ಎನ್. ಸುಮಿತ್ರಾಬಾಯಿ

ಶಾಂತಾನಾಗರಾಜ್

ಹೆಚ್. ಎಸ್: ಗೀತಾ

ಹೇಮಲತಾ ಮಹಿಷಿ

ಪ್ರಕಾಶಕರು

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ

ಬೆಂಗಳೂರು


ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ರೂ. 10 ಬ್ಯಾಂಕ್ ಕಮೀಷನ್ ಸೇರಿಸಿ ಕಳುಹಿಸಬೇಕು. ಎಂ. ಓ. ಫಾರ್ಮಿನ ಕೊನೆಯ ಭಾಗದಲ್ಲಿ ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸಬೇಕು. ಬದಲಾದ ವಿಳಾಸವನ್ನು ದಯವಿಟ್ಟು ಬರೆದು ತಿಳಿಸಿ.


Achala - Edited by
Dr. N. Gayathri

Published by
Dr. G. Ramakrishna on behalf of Jagruthi Mahila Adhyayana Kendra

Printed at
Lipi Mudrana
Bangalore - 560 004


ಆತ್ಮೀಯರೆ,

ಹೊಸ ವರ್ಷದ ಶುಭಾಶಯಗಳು. ಅಚಲ ನಿಮ್ಮೆಲ್ಲರ ಪ್ರೀತಿ, ವಿಶ್ವಾಸಗಳನ್ನು ಪಡೆದುಕೊಂಡು ಹದಿನೆಂಟನೆಯ ವರ್ಷಕ್ಕೆ ಕಾಲಿಡುತ್ತಿದೆ. ಈ ಪತ್ರಿಕೆಯು ಇನ್ನೂ ಹೆಚ್ಚು ಅರ್ಥಪೂರ್ಣವಾಗಿ ಪ್ರಕಟವಾಗಬೇಕಾದರೆ ನಿಮ್ಮೆಲ್ಲರ ಸಲಹೆ, ಸಹಕಾರ ಮತ್ತು ಕ್ರಿಯಾತ್ಮಕ ಭಾಗವಹಿಸುವಿಕೆ ಮುಖ್ಯ. ಪತ್ರಿಕೆಯನ್ನು ನಿಮ್ಮ ವಿಚಾರಗಳ ವೇದಿಕೆಯಾಗಿ ಮಾಡಿಕೊಂಡು ಅರ್ಥಪೂರ್ಣ ಸಂವಾದಕ್ಕೆ ಮತ್ತು ಚಳುವಳಿಗೆ ನೆರವಾಗಿ.

---

ತಿದ್ದುಪಡಿ

ಡಿಸೆಂಬರ್ ತಿಂಗಳ ಅಚಲ ಪತ್ರಿಕೆಯಲ್ಲಿ 'ಮಹಿಳಾ ಜಾಗೃತಿಯ ಆದರ್ಶ ಮಾದರಿ' ಲೇಖನದಲ್ಲಿ ಸಾವಿತ್ರಬಾಯಿ ಫುಲೆ ಹೆಣ್ಣು ಮಕ್ಕಳ ಶಾಲೆ ಆರಂಭಿಸಿದ್ದು 1948ರಲ್ಲಿ ಎಂದಿದೆ. ಅದು 1848ರಲ್ಲಿ ಎಂದಿರಬೇಕಿತ್ತು. ಅವರು ಮರಾಠಿಯಲ್ಲಿ ಕಾವ್ಯಫುಲೆ ರಚಿಸಿದ್ದು 1884ರಲ್ಲಿ ಮತ್ತು ಭಾವನ ಕಾಶಿಸುಬೋಧ್ ರತ್ನಾಕರ್ ರಚಿಸಿದ್ದು 1882ರಲ್ಲಿ ಎಂದಿರಬೇಕಿತ್ತು.

---

ಯಾವುದೇ ವಿವರಗಳನ್ನು ಬರೆಯದ ಚಂದಾಹಣವು ಹಲವಾರು ಎಂ.ಓ ಗಳಲ್ಲಿ ನಮಗೆ ತಲುಪಿದೆ. ಚಂದಾದಾರರು ದಯವಿಟ್ಟು ಎಂ.ಓ ಫಾರ್ಮಿನ ಹಿಂಭಾಗದಲ್ಲಿ ವಿಳಾಸವನ್ನು ಬರೆಯಿರಿ.

## ಅಚಲದ ಚಂದಾ ವಿವರಗಳು ಹೀಗಿವೆ

ವಾರ್ಷಿಕ ಚಂದಾ - ರೂ. 40/- (ವ್ಯಕ್ತಿಗಳಿಗೆ)

ರೂ. 75/- (ಸಂಸ್ಥೆಗಳಿಗೆ)

ಅಜೀವ ಚಂದಾ - ರೂ. 300/- (ವ್ಯಕ್ತಿಗಳಿಗೆ)

ರೂ. 400/- (ಸಂಸ್ಥೆಗಳಿಗೆ)


ಅಚಲ ವಿಳಾಸ

108, ಸ್ಕೈಲೈನ್ ಸುರಭಿ, 14-ಪಿ, ವಿದ್ಯಾಪೀಠ ರಸ್ತೆ,
ಬನಶಂಕರಿ 3ನೇ ಹಂತ, ಬೆಂಗಳೂರು - 560 085

## ಸಂಪಾದಕೀಯ

# ಯಾವ ಪುರುಷಾರ್ಥಕ್ಕಾಗಿ ಕಸಿಶಿಶು?

ವ್ಯಕ್ತಿಗಳ ಜೀವಕೋಶಗಳ ಕಸಿ ಮಾಡಿ ಮಗುವಿಗೆ ಜನ್ಮ ನೀಡುವ ಅಲ್ಯೆಂಗಿಕ ವಿಧಾನ 'ಕ್ಲೋನಿಂಗ್ ಇತ್ತೀಚೆಗೆ ಭಾರಿ ಸುದ್ದಿ ಮಾಡಿದೆ. ಫ್ರಾನ್ಸ್ ದೇಶದ ಫ್ಲೋರಿಡಾದಲ್ಲಿ ಕಳೆದ ಡಿಸೆಂಬರ್ 26ರಂದು ತದ್ರೂಪಿ ಶಿಶು 'ಈವ್'ಳ ಜನನವಾದ ನಂತರ ಅಂತಹುದೇ ಪ್ರಯೋಗಗಳ ಸರಮಾಲೆ ಕಾದು ಕೂತಿದೆ. ವಿಜ್ಞಾನ ಲೋಕದ ಸಾಧನೆಗೆ ಇದು ಹೆಮ್ಮೆಯ ಕಿರೀಟ ಎಂದೆನಿಸಿದರೂ ಸಾಮಾಜಿಕ ಸ್ವಾಸ್ಥ್ಯದ ಬಗ್ಗೆ ಕಾಳಜಿಯಿರುವವರಿಗೆ ಇದು ಒಂದು ಭಾರಿ ತಲೆ ನೋವಾಗಿದೆ. ಸೃಷ್ಟಿಯ ರಹಸ್ಯಗಳ ಬಗ್ಗೆ ಕೌತುಕ, ಸಂತಸ, ಅನುಮಾನಗಳ ಗೂಡಾಗಿದ್ದ ಮಾನವ ಇಂದು ತಾನೇ ಸೃಷ್ಟಿಕರ್ತನಾಗ ಹೊರಟು ಹಲವಾರು ಸಮಸ್ಯೆಗಳ ಸೃಷ್ಟಿಗೂ ಕಾರಣನಾಗಿದ್ದಾನೆಯೇ ಎಂಬ ಅನುಮಾನ ಮೂಡುತ್ತದೆ.

ಈ ಕಸಿಯಿಂದ ಹುಟ್ಟುವ ಮಗುವಿನಲ್ಲಿ ತಾಯಿಯ ಒಂದು ಅಂಶವೂ ಇಲ್ಲದಿರುವುದೊಂದು ವಿಶೇಷ. ಏಕೆಂದರೆ ರೂಪ-ಗುಣ ಇತ್ಯಾದಿಗಳನ್ನು ನಿರ್ಧರಿಸುವ ವರ್ಣತಂತುಗಳನ್ನೇ ಇಲ್ಲಿ ಹೊರತೆಗೆಯಲಾಗುತ್ತದೆ. ಆದ್ದರಿಂದ ಗಂಡುಮಗು ತಂದೆಯ ತದ್ರೂಪಿಯಾಗಿರುತ್ತದೆ. ಕಸಿ ವಿಧಾನದಿಂದ ಹೆಣ್ಣು ಮಗುವಿಗೂ ಸಹ ಜನ್ಮ ನೀಡಬಹುದು. ಗಂಡಿನ ವೀರ್ಯಾಣುವಿನಲ್ಲಿರುವ ಲಿಂಗ ನಿರ್ಧಾರಕ XY ವರ್ಣತಂತುಗಳಲ್ಲಿ ಕೇವಲ X ವರ್ಣತಂತುವನ್ನು ಹೆಣ್ಣಿನ ಅಂಡಾಣುವಿಗೆ ಸೇರಿಸಿದಾಗ ಹುಟ್ಟುವ ಮಗು ಹೆಣ್ಣಿನ ತದ್ರೂಪವಾಗಿರುತ್ತದೆ. ಪ್ರನಾಳ ಶಿಶು ಸೃಷ್ಟಿ ಹಾಗೂ ಕಸಿ ವಿಧಾನದಿಂದ ತದ್ರೂಪಿ ಶಿಶುವಿನ ಸೃಷ್ಟಿ ಎರಡೂ ಅಲ್ಯೆಂಗಿಕವೇ. ತಂದೆ-ತಾಯಿಗಳ ವೀರ್ಯಾಣು ಮತ್ತು ಅಂಡಾಣುಗಳನ್ನು ಈ ಎರಡು ವಿಧಾನದಲ್ಲೂ ಪ್ರಯೋಗಾಲಯದಲ್ಲಿ ಕೃತಕವಾಗಿ ಬೆರಸಲಾಗುತ್ತದೆ. ಕ್ಲೋನಿಂಗ್ ವಿಧಾನದ ವಿಶೇಷವೆಂದರೆ ಬಯಸಿದ ಲಿಂಗದ ಮಗುವನ್ನೇ ಪಡೆಯಬಹುದು ಮತ್ತು ಅದು ತಂದೆಯ ತದ್ರೂಪವಾಗಿರುತ್ತದೆ. ಇದು ಬೇಡವೆಂದರೆ ತಮಗಿಷ್ಟವಾದ ವ್ಯಕ್ತಿಯ ತದ್ರೂಪಾದ ಮಗುವನ್ನು ಪಡೆಯಬಹುದು.

ಮಕ್ಕಳಿಲ್ಲದ ದಂಪತಿಗಳಿಗೆ ಕ್ಲೋನಿಂಗ್ ವಿಧಾನದಿಂದ ವಂಶಾಭಿವೃದ್ಧಿ ಮಾಡಿ ಪುಣ್ಯ ಕಟ್ಟಿಕೊಳ್ಳುವ ಸಂಭ್ರಮದಲ್ಲಿರುವ ವೈದ್ಯರು ಈ 'ತದ್ರೂಪಿ ಶಿಶು'ವಿನ ಜ್ಞಾನದ ದುರ್ಬಳಕೆಯ ಬಗ್ಗೆ ಕಣ್ಣು ಮುಚ್ಚಿ ಕೂತಿರುವರೇ? ಬದಲಿ ಅಂಗಾಗ ಜೋಡಣೆಯ ಕ್ರಿಯೆಯಲ್ಲಿ ತದ್ರೂಪಿ ವ್ಯಕ್ತಿಗಳ ಅಂಗಾಂಗಗಳನ್ನು ಬಳಸಿಕೊಳ್ಳಬಹುದು ಎಂಬ ವಿಚಾರ ಕೇಳಿ ಬರುತ್ತದೆ. 'ತದ್ರೂಪಿ ಶಿಶು'ಗಳನ್ನು ವಾಣಿಜ್ಯ ದೃಷ್ಟಿಯಲ್ಲಿ ನೋಡುವ ಚಿಂತನೆಯ ಹಿಂದೆ ಬಡ ತಾಯಿಯರ ಗರ್ಭಗಳು ಮಾರುಕಟ್ಟೆಗೆ ಬರುವುದಿಲ್ಲವೇ?

ತದ್ರೂಪಿ ಸೃಷ್ಟಿಯ ಬಾಧಕಗಳನ್ನು ಕುರಿತು ಸ್ತ್ರೀರೋಗ ಹಾಗೂ ಪ್ರಸೂತಿ ತಜ್ಞ ಡಾ|| ಸಂಜೀವ ಕುಲಕರ್ಣಿಯವರು ಹೇಳಿರುವ ಮಾತುಗಳನ್ನು ನೆನಪಿಸಿಕೊಳ್ಳಬಹುದು : ''ಜಾಗತೀಕರಣದ ನೆಪದಲ್ಲಿ ಆಧಿಪತ್ಯ ಸ್ಥಾಪನೆ ಪ್ರವೃತ್ತಿಯ ದೇಶಗಳಿಗೆ ಸಾಂಸ್ಕೃತಿಕವಾಗಿ ದಬ್ಬಾಳಿಕೆ ನಡೆಸಲು ಇನ್ನೂ ಅನುಕೂಲವಾಗುವುದು. ಬಿಳಿಯ ಪಾಶ್ಚಾತ್ಯ ಪುರುಷನೇ ಸುಂದರ ಎಂಬ ಕಲ್ಪನೆ ಹೇರಿ, ಇತರೇ ಸೌಂದರ್ಯ ಕಲ್ಪನೆಗೆ ಧಕ್ಕೆ ತರಬಹುದು. ಅಧಿಕಾರ ಕೇಂದ್ರೀಕರಣ, ಬೌದ್ಧಿಕ - ಸಾಂಸ್ಕೃತಿಕ ಅಧಿಪತ್ಯ, ರೋಬೋಟ್‌ನಂತಹ ಮನುಷ್ಯರನ್ನು ಸೃಷ್ಟಿಸಿ ಅವರನ್ನು ಶಾಶ್ವತವಾಗಿ ಗುಲಾಮರಂತೆ ಉಪಯೋಗಿಸಬಹುದು. ಆದರೆ ಬುದ್ಧಿಜೀವಿಗಳನ್ನು ಸೃಷ್ಟಿಸಲಾಗದು, ಏಕೆಂದರೆ ಅವರು ಬೆಳೆದ ಪರಿಸರ ಬೇರೆಯೇ.''

'ಶಿಶು ಜನನ'ವೆನ್ನುವುದು ಮನುಷ್ಯನ ನಾಗರೀಕತೆ, ಸಂಸ್ಕೃತಿಯಲ್ಲಿ ವಿಶಿಷ್ಟ ಮಹತ್ವ ಪಡೆದ ಕ್ರಿಯೆ. ಅದು ಕೇವಲ ದೈಹಿಕವಾದದ್ದಲ್ಲ. ಭಾವನಾತ್ಮಕ ತಳಹದಿಯ, ಸಾಂಸ್ಕೃತಿಕ ಪದರುಗಳನ್ನುಳ್ಳ ಘಟನೆ. ಹೊಸ ಜೀವ ಸೃಷ್ಟಿಗೆ ಮುಖ್ಯ ಕಾರಣಳಾಗುವ ತಾಯಿ ಮತ್ತು ತಾಯಿಯ ಗರ್ಭವನ್ನು ಕುರಿತೇ ಸಾಕಷ್ಟು ಕುತೂಹಲ, ಸಂಭ್ರಮ, ಕನಸುಗಳು ನಮ್ಮ ಸಂಸ್ಕೃತಿಯಲ್ಲಿ ಹಾಸು ಹೊಕ್ಕಾಗಿವೆ. ಇವೆಲ್ಲವನ್ನೂ ಹೊಸಕಿ ಹಾಕಿ ತಾಯಿಯನ್ನು 'ಬಾಡಿಗೆ ಗರ್ಭಕೋಶ'ದ ಸರಕಾಗಿ ಕಾಣುವ ಆಲೋಚನೆ ಎಷ್ಟು ಸಾಧು? ಇಂದು ನಡೆಯುತ್ತಿರುವ ಸೌಂದರ್ಯ ಸ್ಪರ್ಧೆಗಳು 'ಸೌಂದರ್ಯ'ದ ವ್ಯಾಖ್ಯಾನವನ್ನು ಸೀಮಿತಗೊಳಿಸಿ ಈ ಶ್ರೇಷ್ಠತೆಯ ಮಾನದಂಡದಲ್ಲೂ ವಾಣಿಜ್ಯದ ವಾಸನೆ ಮೂಡಿಸಿದ್ದಾಗಿದೆ. ಕ್ಲೋನಿಂಗ್ ಸಂಸ್ಕೃತಿಯಿಂದಾಗಿ 'ಸೌಂದರ್ಯ'ವೆನ್ನುವುದು ಜಗತ್ತಿನ ಹಿರಿಯಣ್ಣರು ಹೇಳಿದ್ದೇ ತತ್ವವಾಗಿ ಮನುಕುಲದ ವೈವಿಧ್ಯತೆಗೆ ಅಂತ್ಯ ಹಾಡಿದಂತಾಗುತ್ತದೆ.

ಹೆಣ್ಣನ್ನು ಅವಳ ಮನಸ್ಸು ಮತ್ತು ಬುದ್ಧಿಗಿಂತ ಹೆಚ್ಚಾಗಿ ದೈಹಿಕ ನೆಲೆಯಲ್ಲಿಯೇ ನೋಡುವ ದೃಷ್ಟಿಕೋನದ ವಿರುದ್ಧ ಸ್ತ್ರೀವಾದಿಗಳು ಪ್ರಬಲವಾಗಿ ವಿರೋಧಿಸುತ್ತಲೇ ಬಂದಿದ್ದಾರೆ. ಈ ಕ್ಲೋನಿಂಗ್ ಸಾಧನೆಯೂ ಕೂಡ ಹೆಣ್ಣಿನ ಮಹತ್ವವನ್ನು ಅಲ್ಪವಾಗಿಸುವ, ಕ್ರಿಯೆ. ಅಷ್ಟೇ ಅಲ್ಲ ಅಮಾನವೀಯವಾಗಿಸುವ ಪ್ರಕ್ರಿಯೆ. ನಾವು ಇಪ್ಪತ್ತೊಂದನೆಯ ಶತಮಾನದಲ್ಲಿ ವಿಜ್ಞಾನದ ಸಾಧನೆ ತುತ್ತೂರಿ ಊದಿಕೊಳ್ಳುತ್ತಿರುವ ಸಂದರ್ಭದಲ್ಲಿ ಹೆಣ್ಣಿನ ಬಗ್ಗೆ ಅನಾಗರೀಕವಾಗಿ ಯೋಚಿಸುತ್ತಿರುವುದೂ ಅಷ್ಟೇ ಸತ್ಯ. ನಾಗರೀಕತೆಗೆ ತನ್ನದೇ ರೀತಿಯಲ್ಲಿ ಅಮೂಲ್ಯ ಕೊಡುಗೆಗಳನ್ನು ನೀಡಿರುವ ಹೆಣ್ಣನ್ನು ಮತ್ತೆ 'ದೇಹ', ಅದರಲ್ಲೂ 'ಗರ್ಭಕೋಶ'ದ ಹಂತಕ್ಕೆ ಇಳಿಸಿ ನೋಡುವುದು ಯಾವ ಪುರುಷಾರ್ಥಕ್ಕೆ?

- ಎನ್ ಗಾಯತ್ರಿ

# ಬದುಕಿನ ಅದಮ್ಯಶಕ್ತಿಯ ಸಂಕೇತವಾದ ಸ್ತ್ರೀಚಿತ್ರಣ



ಕನ್ನಡ ಚಿತ್ರರಂಗದಲ್ಲಿ ಗಿರೀಶ್ ಕಾಸರವಳ್ಳಿಯವರಿಗೆ ವಿಶಿಷ್ಟ ಸ್ಥಾನ. ಅವರು ನಿರ್ದೇಶಿಸಿರುವ ಒಟ್ಟು ಒಂಭತ್ತು ಚಿತ್ರಗಳಲ್ಲಿ ನಾಲ್ಕು ಚಿತ್ರಗಳಿಗೆ ಅತ್ಯುನ್ನತ ಪ್ರಶಸ್ತಿಯಾದ ಸ್ವರ್ಣಕಮಲದ ಸನ್ಮಾನ. ತಮ್ಮ 'ದ್ವೀಪ' ಚಿತ್ರಕ್ಕೆ ಈ ವರ್ಷದ ಸ್ವರ್ಣಕಮಲದ ಪ್ರಶಸ್ತಿಯನ್ನು ಪಡೆದ ಗಿರೀಶರು ಈ ವರ್ಷದ ರಾಜ್ಯೋತ್ಸವ ಪ್ರಶಸ್ತಿಯಿಂದಲೂ ಪುರಸ್ಕೃತರಾದವರು.

'ಮಳೆ' ಮತ್ತು 'ನೀರು' - ಎರಡು ನೈಸರ್ಗಿಕ ವಸ್ತುಗಳನ್ನು ಪ್ರಧಾನ ಹಿನ್ನೆಯಲ್ಲಿಟ್ಟುಕೊಂಡು ಮನುಷ್ಯ ಸಂಬಂಧಗಳನ್ನು ಅನ್ವೇಷಿಸಹೊರಟಿರುವ ಈ ಚಿತ್ರ ಪ್ರಧಾನವಾಗಿ ಸ್ತ್ರೀವಾದಿ ನೆಲೆಯುಳ್ಳದ್ದು. ಆರಂಭದಲ್ಲಿ ಸೀತಾಪರ್ವತದ ಬಳಿ ಹರಿಯುವ ನದಿಗೆ ಸರ್ಕಾರ ಅಣೆಕಟ್ಟು ಕಟ್ಟಿದ್ದರಿಂದ ಉದ್ಭವಿಸಿದ ಸಮಸ್ಯೆಯಿಂದ ಚಿತ್ರ ಆರಂಭವಾಗುತ್ತದೆ. ಸೀತಾ ಪರ್ವತವಾಸಿ ದುಗ್ಗಜ್ಜ ಭೂತ ಕಟ್ಟುವ ಕಾಯಕವನ್ನು ಅತ್ಯಂತ ನಿಷ್ಠೆಯಿಂದ ನಡೆಸಿಕೊಂಡು ಬಂದವನು. ಅವನ ವಂಶಜರು ಎರಡು ಮೂರು ತಲೆಮಾರುಗಳ ಹಿಂದೆ ದಕ್ಷಿಣ ಕನ್ನಡ ಜಿಲ್ಲೆಯಿಂದ ಬಂದು ಅಲ್ಲಿ ನೆಲೆಸಿದವರು. ನದಿಗೆ ಅಣೆಕಟ್ಟು ಕಟ್ಟಿರುವ ಕಾರಣ ಹಿನ್ನೀರು ಪ್ರದೇಶದ ಹಲವು ಹಳ್ಳಿಗಳು ಮುಳುಗಡೆಯಾಗುತ್ತವೆ. ಆ ಪೈಕಿ ಸೀತಾಪರ್ವತವೂ ಸೇರುತ್ತದೆ. ತಮ್ಮ ಗದ್ದೆ, ತೋಟ, ಮನೆ ಕಳೆದುಕೊಂಡ ಆ ಊರಿನವರು ಸರಕಾರ ನಿಗದಿ ಮಾಡಿದ ಪರಿಹಾರ ಧನ ಪಡೆದು ಒಬ್ಬೊಬ್ಬರಾಗಿ ಬೇರೆ ಬೇರೆ ಕಡೆ ಹೋಗಿ ನೆಲಸತೊಡಗುತ್ತಾರೆ. ದುಗ್ಗಜ್ಜನಿಗೆ ಆಸ್ತಿ ಪಾಸ್ತಿ ಇಲ್ಲ. ಭೂತವನ್ನೇ ನಂಬಿದವನು ಆತ. ಆದ್ದರಿಂದ ಸೀತಾಪರ್ವತ ಬಿಟ್ಟು ಏನಾದರೂ ಹೊರ ನಡೆಯುವುದಿಲ್ಲವೆಂಬುದೇ ಅವನ ನಿರ್ಧಾರ. ಮಗ ಗಣಪನಿಗೆ ಆ ಭೂತದ ಬಗ್ಗೆ ಅಷ್ಟೊಂದು ಗಾಢ ನಂಬಿಕೆಯಿಲ್ಲದಿದ್ದರೂ ತಂದೆಯ ನಿರ್ಧಾರದ ಬಗ್ಗೆ ಶ್ರದ್ಧೆಯಿತ್ತು. ಹೊಸ ಸ್ಥಳಕ್ಕೆ ಗುಳೆ ಹೋಗಲು ಒಪ್ಪದ ಮನಸ್ಸು. ಇವರ ಮಧ್ಯೆ ನಾಗಿಯದು ಹೊಸದನ್ನು ಬಯಸುವ, ಅದಮ್ಯ ಪ್ರೀತಿ, ಆಸಕ್ತಿಯುಳ್ಳ ಮನಸ್ಸು. ಅಷ್ಟೇ ಆತ್ಮ ವಿಶ್ವಾಸವುಳ್ಳವಳು. ಕಷ್ಟಗಳು, ಅಪಾಯವನ್ನು ಎದುರಿಸುವ ಚೈತನ್ಯಶಾಲಿ. ಈ ಕುಟುಂಬದ ಚೌಕಟ್ಟಿಗೆ ಹೊರಗಿನಿಂದ ಬರುವ ವ್ಯಕ್ತಿ ಕೃಷ್ಣ. ಅವರ ಹಿತಚಿಂತಕನಾಗಿ ಕಾರ್ಯ ನಿರ್ವಹಿಸುವನಲ್ಲದೆ ಅವರೆಲ್ಲರ ನಂಬಿಕೆ, ಕ್ರಿಯಾಶಕ್ತಿಗಳಿಗೆ ಚಾಲನೆ ನೀಡುವ ಕಾರಣಕರ್ತನಾಗುತ್ತಾನೆ. ಇದು ಚಿತ್ರಕತೆಯ ಕ್ಯಾನ್‌ವಾಸ್, ಆದರೂ ನಿರ್ದೇಶಕ ಕಾಸರವಳ್ಳಿಯವರು ಹಲವಾರು ಚಿಂತನೆಗಳನ್ನು ಇಲ್ಲಿ ಮಂಥನ ನಡೆಸಿ ಬದುಕಿನ ಶಕ್ತಿಯ ಪಾರಮ್ಯತೆಯನ್ನು ಮೆರೆಯುತ್ತಾರೆ. ನಾಗಿ ಈ ಜೀವಶಕ್ತಿಯ ಸಂಕೇತವಾಗುತ್ತಾಳೆ. ಆದ್ದರಿಂದಲೇ ನನಗೆ ಇದು ಸ್ತ್ರೀವಾದಿ ಚಿತ್ರವಾಗಿ ಮುಖ್ಯವೆನಿಸುತ್ತದೆ.

"ಹುಟ್ಟಿನಿಂದ ಬಾಳಿ ಬದುಕಿದ ಮನೆ ಬಿಟ್ಟು ದೂರ ಹೋಗುವುದು ಎಷ್ಟೊಂದು ಕಷ್ಟ, ಎನ್ನುವುದು ನಿನಗೇನು ಗೊತ್ತು?" ಎಂದು ಹೆಂಡತಿ ನಾಗಿಯನ್ನು ಪ್ರಶ್ನಿಸುತ್ತಾನೆ, ಗಂಡ ಗಣಪ. ಅದಕ್ಕೆ ನಾಗಿ ಕೊಡುವ ಉತ್ತರ, "ಹೌದು, ಹುಟ್ಟಿ ಬೆಳೆದ ತವರನ್ನು ಬಿಟ್ಟು ಗಂಡನ ಮನೆಗೆ ಬರುವ ಹೆಣ್ಣಿಗೆ ಆ ಕಷ್ಟ ಯಾರೂ ಹೇಳಬೇಕಿಲ್ಲ' ಎನ್ನುವ ನಾಗಿಯ ಮಾತು ಇಡೀ ಚಿತ್ರದ ವ್ಯಾಖ್ಯಾನವಾಗಿ ಪರಿಣಮಿಸುತ್ತದೆ. ಈ ನಾಗಿಯ ಪಾತ್ರದ ಗ್ರಹಿಕೆಯಲ್ಲಿ ಗಿರೀಶರು ಕಾಣುವ ಸ್ತ್ರೀಯಾತ್ಮಕ ಆಯಾಮಗಳು ಬೆರಗು ಹುಟ್ಟಿಸುತ್ತವೆ.

ಪೇಟೆಯ ಕನಸುಗಾತಿ ನಾಗಿ ಗಣಪನನ್ನು ಮದುವೆಯಾಗಿ ಕೊಂಪೆಗೆ ಬಂದರೂ ಅಂದದ ಕನಸು ಕಾಣುವುದನ್ನು ಬಿಡುವುದಿಲ್ಲ. ಅಣೆಕಟ್ಟಿನಿಂದಾಗಿ ಊರು ಮುಳುಗಡೆಯಾಗುವ ಸಂಗತಿ ಊರಿನವರಿಗೆ ಬೇಸರದಾದ್ದರೂ ನಾಗಿ ಹೊಸ ಬದುಕು ಸಿಗಬಹುದೆಂದು ಆಶಿಸುತ್ತಾಳೆ. ಬದುಕಿನ ಬದಲಾವಣೆಯ ಕನಸು ಕಾಣುತ್ತಾಳೆ. ಅವಳಿಗೆ ಗಂಡ ಮತ್ತು ಮಾವ ನೆಚ್ಚಿಕೊಂಡ ಭೂತದ ಕಾರಣಿಕ ಕೆಲಸದಲ್ಲೇನೂ ವಿಶ್ವಾಸವಿಲ್ಲ. ಸರ್ಕಾರ ಅಣೆಕಟ್ಟು ಕಟ್ಟುವುದನ್ನು ಕೇಳಿದಾಗ ಆದರಿಂದಲಾದರೂ ತಾವು

ವಲಸೆ ಹೋಗಿ ಹೊಸ ಜೀವನ ನಡೆಸಬಹುದೇನೋ ಎಂಬ ಒಳ ಮನಸ್ಸು. ಅದಕ್ಕೆ ಅವಳ ತಂದೆ, ತಾಯಿಗಳ ಒತ್ತಾಸೆ, ಬೆಂಬಲವೂ ಇದೆ. ಆದರೆ ಭೂತದ ಗುಡಿಯನ್ನು ನೆಚ್ಚಿ ಬದುಕಲು ನಿರ್ಧರಿಸಿದ ಗಂಡ ಮತ್ತು ಮಾವನ ಮನಸ್ಸನ್ನು ಬದಲಿಸುವುದಾದರೂ ಹೇಗೆ? ಸರ್ಕಾರದವರೂ ಸೂಕ್ತ ಪರಿಹಾರ ನೀಡಿದರೆ ಅವರು ಮನಸ್ಸು ಬದಲಿಸಬಹುದಾದರೂ ಸರ್ಕಾರದ ದೃಷ್ಟಿಯಲ್ಲಿ ಮಾಪನ ಮಾಡಬಹುದಾದ ಆಸ್ತಿ ಈ ಕುಟುಂಬಕ್ಕಿಲ್ಲ. ಇಂತಹ ವೈರುಧ್ಯಗಳ ನಡುವೆ ನಾಗಿಯ ಪಾತ್ರ ಬೆಳೆಯುತ್ತದೆ.

ಮೇಲುನೋಟಕ್ಕೆ ಈ ಚಿತ್ರ ಅಣೆಕಟ್ಟಿನಿಂದಾಗಿ ಉದ್ಭವಿಸುವ ಸಂತ್ರಸ್ತ ಜನರ ಸಮಸ್ಯೆಗಳು ಮತ್ತು ಪರಿಹಾರದ ವಿಚಿತ್ರ ವಿಧಾನಗಳ ಚಿತ್ರವೇನೋ ಎಂದೆನಿಸಿದರೂ ಮೂಲತಃ ಇದರ ಕ್ಯಾನ್‌ವಾಸ್ ನಿರ್ದಿಷ್ಟ ಮಿತಿಯುಳ್ಳದ್ದು. ಕುಟುಂಬವೊಂದರ ನಂಬಿಕೆ, ಆಚರಣೆಗಳ ದುರಂತವನ್ನು , ಆ ಚೌಕಟ್ಟಿನಲ್ಲಿಯೇ ಬದುಕಿನ ಸಂಘರ್ಷದಲ್ಲಿ ವಿಜಯಿಯಾಗುವ ಗಟ್ಟಿ ಹೆಣ್ಣಿನ ಜೀವನ ದರ್ಶನವನ್ನು ಪರಿಚಯಿಸುವ ಚಿತ್ರವಾಗುತ್ತದೆ. ಆದ್ದರಿಂದಲೇ ಸರ್ಕಾರದಿಂದ ಪರಿಹಾರಧನ ಪಡೆಯುವ ಕತೆಯಾಗಿ ಬಿಡಬಹುದಾದ ಅಪಾಯವನ್ನು ಮೀರಿ ಈ ಚಿತ್ರಕತೆ ಬೆಳೆಯುವುದರಲ್ಲಿ ಗಿರೀಶರ ಸೃಜನಶೀಲತೆಯು ಸ್ಪಷ್ಟವಾಗುತ್ತದೆ.

ಜೀವನವನ್ನು ಅದಮ್ಯ ವಿಶ್ವಾಸ ಮತ್ತು ಪ್ರೀತಿಯಿಂದ ಸ್ವೀಕರಿಸುವ ನಾಗಿ ಚಿತ್ರದುದ್ದಕ್ಕೂ ಚಟುವಟಿಕೆಯ ಚಿಲುಮೆ. ಆದ್ದರಿಂದಲೇ ಅವಳಿಗೆ ಅವಳ ಸಂಬಂಧಿ ಕೃಷ್ಣ ಆಪ್ತನಾಗುತ್ತಾನೆ. ನಾಗಿಯ ಕುಟುಂಬಕ್ಕೆ ಹೊರಗಿನವನಾದ ಕೃಷ್ಣ ಅವರ ಹಿತಚಿಂತಕನಾಗಿ, ಆಪದ್ಬಾಂಧವನಾಗಿ, ಪರಿಹಾರ ದೊರಕಿಸಿಕೊಳ್ಳಲು ನೆರವು ನೀಡಿ ಅವರ ಬದುಕು ಹಸನುಗೊಳಿಸುವ ಶ್ರೀಕೃಷ್ಣ ಪರಮಾತ್ಮನಾಗಿ ಅವತರಿಸುತ್ತಾನೆ. ನಾಗಿಯ ಗಂಡ ಗಣಪನಿಗೆ ಕೃಷ್ಣನ ಚಟುವಟಿಕೆ ಮತ್ತು ಮಾತಿನಲ್ಲಿ ಆಸಕ್ತಿಯಿಲ್ಲ. ಅಷ್ಟೇ ಅಲ್ಲ , ಅವನ ಆಗಮನದಿಂದ ಎಲ್ಲರ ಸಂಬಂಧಗಳಲ್ಲಿ ಅನುಮಾನದ ಹೊಗೆ ಹಬ್ಬಿ ಬದುಕು ಕಗ್ಗಂಟಾಗಿ ಎಲ್ಲರ ಬದುಕು ಒಂದು ದ್ವೀಪವಾಗಿ ಬದುಕುವಂತಹ ಸ್ಥಿತಿಯಾಗುತ್ತದೆ. ನಾಗಿ ಮತ್ತು ಕೃಷ್ಣನ ಸಂಬಂಧವೆಂತಹುದು ಎಂಬುದನ್ನು ಸೂಚಿಸಲು ಗಣಪ ಮತ್ತು ನಾಗಿ ಅವನ ವಿಷಯವಾಗಿ ಜಗಳವಾಡುತ್ತಿರುವಾಗ ಗೋಡೆಯ ಮೇಲೆ ದ್ರೌಪದಿಗೆ ವಸ್ತ್ರದಾನ ಮಾಡುವ ಕೃಷ್ಣನ ಫೋಟೋ ಇರುವುದನ್ನು ಕಾಣಿಸಿರುವುದು ಔಚಿತ್ಯ ಪೂರ್ಣವಾಗಿದೆ.

ನಾಗಿಯ ಕುಟುಂಬದೊಳಗೆ ಉಂಟಾಗುವ ಎಲ್ಲ ದುರಂತಗಳನ್ನು ದಿಟ್ಟತನದಿಂದ ಎದುರಿಸುವ ನಾಗಿಯ ಚಿತ್ರಣ ಕನ್ನಡ ಚಿತ್ರರಂಗದಲ್ಲಿಯೇ ಅಪರೂಪದ್ದು. ತನ್ನ ಬದುಕಿನ ನಿರ್ಧಾರಕ್ಕೆ ದೈವದ ಸಮ್ಮತಿ ಕೇಳಲು ಹೋಗುವ ದುಗ್ಗಜ್ಜ ಮಳೆಯ ರಭಸದಲ್ಲಿ ಸಿಕ್ಕಿ ಮರಣವನ್ನಪ್ಪಿದಾಗ ಅವನನ್ನು ಅರಸಿಕೊಂಡು ನಾಗಿಯೊಬ್ಬಳೇ ಸುರಿಯುವ ಮಳೆಯಲ್ಲಿ ಹೋಗುವ ದೃಶ್ಯ, ಮಳೆಯ ಪ್ರವಾಹದಲ್ಲಿ ಕೊಚ್ಚಿಹೋಗಲಿರುವ ಕೃಷ್ಣನನ್ನು ಒಂಟಿಯಾಗಿ ಹೋಗಿ ಉಳಿಸಿ ಕರೆದುಕೊಂಡು ಬರುವ ನಾಗಿಯ ದೃಶ್ಯ ಅವಳ ದಿಟ್ಟತನದೊಂದಿಗೆ ಮಾನವೀಯ ಅಂತಃಕರಣವನ್ನೂ ಪರಿಚಯಿಸುತ್ತದೆ. ಆಪದ್ಬಾಂಧವ ಕೃಷ್ಣನ ನೆರವಿಲ್ಲದೆ ಬದುಕು ಸಾಗಿಸಬೇಕೆಂದು ನಿರ್ಧರಿಸುವ ನಾಗಿ ಅವನನ್ನು ಚುಚ್ಚು ಮಾತುಗಳಿಂದ ಹೊರ ನಡೆಯುವಂತೆ ಮಾಡುತ್ತಾಳೆ. ಗಣಪ ಮತ್ತು ನಾಗಿಯರಿಬ್ಬರೇ ಮನೆಯಲ್ಲಿ ಉಳಿದಾಗ ಕೇಳಿ ಬರುವ ಹುಲಿಯ ಘರ್ಜನೆಯಿಂದ ಮನೆಯನ್ನು ರಕ್ಷಿಸಲು ಉದ್ಯುಕ್ತಳಾಗುವ ನಾಗಿಗೆ ಗಂಡ ಯಾವ ಸಹಾಯವನ್ನೂ ಮಾಡದೆ ಮುಸುಕೆಳೆದು ಮಲಗುವುದು ಪರಿಸ್ಥಿತಿಯ ವಿಷಮತೆಯನ್ನು ರಾತ್ರಿಯಿಡಿ ಬೆಂಕಿ ಉರಿಸುತ್ತ , ಮನೆಯ ಸುತ್ತಲೂ ಕಾವಲು ಕಾಯುತ್ತ ಹುಲಿಯ ಬೆದರಿಸುವ ದೃಶ್ಯ ಚಿತ್ರ ಮುಗಿದ ನಂತರವೂ ಕಣ್ಣಿಗೆ ಕಟ್ಟುತ್ತದೆ.

ನಾ. ಡಿಸೋಜರವರ ಕಾದಂಬರಿಯನ್ನು ತಮ್ಮ ಉದ್ದೇಶಕ್ಕೆ ತಕ್ಕಂತೆ ಮಾರ್ಪಡಿಸಿಕೊಂಡಿರುವ ಗಿರೀಶರು ಸಿನಿಮಾ ಭಾಷೆಯಲ್ಲಿ ಚಿತ್ರಿಸುವಾಗ ತಮ್ಮ ಸಾಮಾಜಿಕ ಕಳಕಳಿಯನ್ನು ಅಭಿವ್ಯಕ್ತಿಸುವಲ್ಲಿ ಸಫಲರಾಗಿದ್ದಾರೆ. ಈ ಚಿತ್ರದ ಪಾತ್ರಗಳಿಂದ ದುಗ್ಗಜ್ಜ , ಗಣಪ, ನಾಗಿ, ಕೃಷ್ಣ ಎಲ್ಲರೂ ತಮ್ಮ ಪಾತ್ರಗಳಿಗೆ ನ್ಯಾಯ ಒದಗಿಸಿದ್ದಾರೆ. ಸೌಂದರ್ಯರಂತಹ ಸೊಬಗಿನ ನಟಿ ಡಿ-ಗ್ಲಾಮರೈಸ್ ಮಾಡಿಕೊಂಡು ಹಳ್ಳಿಯ ಹುಡುಗಿಯಾಗಿ ಅದ್ಭುತ ಪ್ರದರ್ಶನ ನೀಡಿರುವುದು ಚಿತ್ರದ ಜೀವಾಳವಾಗಿದೆ. ಐಸಾಕ್ ಥಾಮಸ್‌ರ ಸಂಗೀತ, ವೈಶಾಲಿ ಕಾಸರವಳ್ಳಿಯವರ ವಸ್ತ್ರ ವಿನ್ಯಾಸ ಮತ್ತು ಚಿಕ್ಕ ಚಿಕ್ಕ ಪಾತ್ರಗಳ ನುರಿತ ಅಭಿನಯ ಚಿತ್ರಕ್ಕೆ ಮೆರುಗು ನೀಡಿದೆ. ಚಿತ್ರದ ಯಶಸ್ಸಿಗೆ ಕಳಸವಿಟ್ಟಿರುವುದು ರಾಮಚಂದ್ರರ ಛಾಯಾಗ್ರಹಣ. ಮಲೆನಾಡಿನ ಮಳೆಯ ದಟ್ಟ ಅನುಭವವನ್ನು ಪ್ರೇಕ್ಷಕರು ಸ್ವತಃ ಅನುಭವಿಸುವಂತೆ ಮಾಡುವಲ್ಲಿ ಚಿತ್ರ ಯಶಸ್ವಿಯಾಗುತ್ತದೆ. ಚಿತ್ರ ನೋಡುತ್ತ ನೋಡುತ್ತ ನಾವೂ ಮಳೆಯಲ್ಲಿ ನೆನೆಯುತ್ತಿದ್ದೇವೆ ಎಂಬ ಅನುಭವ ಬರಿಸುವುದು ನಿರ್ದೇಶಕರ ಹಾಗೂ ಛಾಯಾಚಿತ್ರಗಾರರ ನೈಪುಣ್ಯಕ್ಕೆ ಸಾಕ್ಷಿಯಾಗಿದೆ.

- ಅಚಲ

# ಚಿತ್ರದುರ್ಗದ ಅಂಬಾಬಾಯಿ

*- ಶಾಂತಾ ನಾಗರಾಜ್*

'ಹತ್ತು ವರ್ಷದ ಹಾಲುಗಲ್ಲ ಹಸುಳೆಗೆ ಮದುವೆ. ಹನ್ನೆರಡನೇ ವಯಸ್ಸಿನಲ್ಲಿ ಒಂದೇ ದಿನ ಗಂಡ ಮತ್ತು ತಂದೆಯ ಮರಣ. ಅತ್ತೆಮನೆಯ ಬಳುವಳಿಯೆಂದರೆ ಕೇಶಮುಂಡನ ಮತ್ತು ಉಳ್ಳವರಾದರೂ ಹಿಡಿಕೂಳು ಹಾಕದೆ ಬಾಲೆಯನ್ನು ನಿರ್ದಯವಾಗಿ ತೌರಿಗಟ್ಟಿದ್ದು.' - ಇದು ಚಿತ್ರದುರ್ಗದ ಅಂಬಾಬಾಯಿಯವರ ಬದುಕಿನ ಪ್ರಾರಂಭ. ಇಪ್ಪತ್ತನೇ ಶತಮಾನದ ಅರ್ಧ ಶತಕದವರೆಗೆ ಇಂಥ ದುರ್ದೈವಿ ಮಹಿಳೆಯರ ಸಂಖ್ಯೆ ಈ ನೆಲದಲ್ಲಿ ಎಷ್ಟಿತ್ತೋ ಲೆಕ್ಕ ವಿಟ್ಟವರ್ಯಾರು? ಬಾಲ್ಯವಿವಾಹ, ಪ್ಲೇಗು ಕಾಲರಾದಂಥ ಮಾರಣಾಂತಿಕ ರೋಗಗಳು, ವಿಧವೆಯರ ಸಂಖ್ಯೆಯನ್ನು ಇನ್ನಿಲ್ಲದಂತೆ ಹೆಚ್ಚಿಸಿದ್ದವು. ಅಶಿಕ್ಷಣ, ಅವಹೇಳನ, ನಿರ್ದಯತೆಗೆ ತುತ್ತಾದ ಈ ಜೀವಿಗಳು ಬೇಂದ್ರೆಯವರು ಹೇಳುವಂತೆ ''ಹುರಿಹಿಟ್ಟು ಅವಲಕ್ಕಿಗೆ ಹುಟ್ಟಿದವಳೋ'' ಎಂದು ಮೂತಿ ತಿವಿಸಿಕೊಂಡೇ ಕಾಲಹಾಕಿದವು. ಮನಸ್ಸು ಅರಳುವ, ದೇಹ ಬೆಳೆಯುವ ವಯಸ್ಸಿನಲ್ಲಿ ಎಲ್ಲ ರೀತಿಯ ಕಟ್ಟು ಪಾಡುಗಳಿಗೆ ಈ ಬದುಕುಗಳು ಬಲಿಯಾಗಬೇಕಾಯಿತು. ಎಂಥ ಚಳಿಯಲ್ಲೂ ತಣ್ಣೀರು ಸ್ನಾನ. ಒಂದೇ ಹೊತ್ತು ಊಟ. ಕಠೋರ ಮಡಿಯ ಆಚರಣೆ, ಅಖಂಡ ಬ್ರಹ್ಮಚರ್ಯ, ಸಮಾಜದ ಈ ಎಲ್ಲ ನಿಬಂಧನೆಯ ಒಂದೆಳೆಯನ್ನು ಮೀರಿದರೂ ಸಾಕು ಆ ಜೀವಿಗೆ ಗಂಗೆಯ ತಳವೇ ಗತಿ! ಹೀಗೆ ಅಳಿದವರು, ಉಳಿದವರಲ್ಲೂ ಹಾಡುವ, ಬರೆಯುವ ಪ್ರತಿಭೆ ಪ್ರಖರವಾಗಿಯೇ ಇತ್ತು. ಅವರಲ್ಲಿ ಚಿತ್ರದುರ್ಗದ ಅಂಬಾಬಾಯಿಯೂ ಒಬ್ಬರು.

ಚಿತ್ರದುರ್ಗದ ಅಂಬಾಬಾಯಿ (ಕಾಲ 1902ರಿಂದ 1945) ಬದುಕಿ ಬಾಳಿದ್ದು (!?) ಕೇವಲ 42 ವರ್ಷಗಳು. ಹನ್ನೆರಡಕ್ಕೆ ವಿಧವೆ ಪಟ್ಟ ದಕ್ಕಿದ ನಂತರ ಇಪ್ಪತ್ತೆಂಟು ವರ್ಷಗಳು ಯಾವ ರೀತಿ ಬದುಕು ಕಳೆದರು ಎನ್ನುವುದರ ಬಗ್ಗೆ ಎಲ್ಲಿಯೂ ದಾಖಲೆ ಸಿಕ್ಕುವುದಿಲ್ಲ. ಆದರೆ ಇಪ್ಪತ್ತೆಂಟನೇ ವಯಸ್ಸಿನಲ್ಲಿ ದೇವರಾಯನ ದುರ್ಗದ ಶ್ರೀ ತಂದೆಮುದ್ದು ಮೋಹನ ವಿಠಲರೆಂದು ಅಂಕಿತ ಪಡೆದ ಶ್ರೀ ಸುಬ್ಬರಾಯದಾಸರಿಂದ ಅಂಕಿತ ಪಡೆದ ಮೇಲೆ ಅಂಬಾಬಾಯಿಯ ಬದುಕು ಹೊಸ ತಿರುವನ್ನು ಪಡೆಯುತ್ತದೆ. ಆಕೆಯೊಳಗಡಗಿದ್ದ ಸುಪ್ತ ಪ್ರತಿಭೆಗೆ ಹೊರಬರುವ ಹೊಸ ಮಾರ್ಗ ಲಭಿಸುತ್ತದೆ. ಆಕೆ ಬರೆಯುತ್ತಾರೆ ''ಗುರುಗಳು ಈ ಜಗತ್ತಿನ ಎಲ್ಲ ಜೀವಿಗಳೂ ದೈವಾಂಶಸಂಭೂತರೇ ಎಂದು ಹೇಳಿದಾಗ ನನಗೆ ರೋಮಾಂಚನವಾಯಿತು, ಭಯವಾಯಿತು'' ಎಂದು. ವಿಧವೆ ಎನ್ನುವ ಕೀಳರಿಮೆಯಲ್ಲೇ ಕುಸಿಯುತ್ತಿದ್ದ ಮನಸ್ಸಿಗೆ ಹೊಸದಿಕ್ಕು ತೆರೆದ ಪುಳಕದ ಕ್ಷಣ ಅದು. ಭಯವಲ್ಲದೆ ಬೇರೇನಾಗಲು ಸಾಧ್ಯ?

ಶ್ರೀ ಭೀಮರಾಯರು, ಶ್ರೀಮತಿ ಭಾರತೀಬಾಯಿಯವರ ಎರಡನೇ ಮಗಳು ಅಂಬಾಬಾಯಿ ಬಾಲ್ಯದಿಂದಲೇ ಜಾಣೆ. ಆಕೆಯ ಚುರುಕು ಬುದ್ಧಿಯನ್ನು ಗಮನಿಸಿದ ತಂದೆ ಮಹಿಳೆಯರಿಗೆ ಅಲಭ್ಯವಿದ್ದ ಶಿಕ್ಷಣ ಕ್ಷೇತ್ರಕ್ಕೆ (ಸಮಾಜದ, ಕುಟುಂಬದ ಕಟ್ಟುಪಾಡುಗಳನ್ನು ಅಲಕ್ಷಿಸಿ) ದಾಖಲು ಮಾಡಿಸಿದರು. ಎರಡು ಮೂರು ತರಗತಿಗಳನ್ನು ಅಬಾಧಿತವಾಗಿ ಮುಗಿಸುವುದು ಅಂಬಾಬಾಯಿಗೆ ಸಾಧ್ಯವಾದರೂ ಅಂದಿನ ಸಮಾಜದ ದೊಡ್ಡ ನಿಯಮವಾದ 'ಹೆಣ್ಣಿಗೆ ಋತುಮತಿಯಾಗುವ ಮೊದಲೇ ಮದುವೆಮಾಡಿಬಿಡಬೇಕೆಂಬ' ಕಟ್ಟನ್ನು ಸ್ವತಃ ಭೀಮರಾಯರಿಗೇ ದಾಟಲು ಸಾಧ್ಯವಾಗಲಿಲ್ಲ. ಪರಿಣಾಮ ಹತ್ತಕ್ಕೇ ಹಸೆಮಣೆ ಏರಲೇ ಬೇಕಾದ ಹಣೆಬರಹ! ಹನ್ನೆರಡಕ್ಕೆ ವಿಧವೆ ಪಟ್ಟ, ಗಂಡ ಸತ್ತದಿನವೇ ತಂದೆಯೂ ಕಣ್ಮರೆಯಾದದ್ದರಿಂದ ಎರಡೂ ಆಸರೆಗಳು ಒಮ್ಮೆಗೇ ಕಳಚಿ, ಅಣ್ಣ, ತಮ್ಮ, ತಂಗಿಯ ಮನೆಯಲ್ಲಿ ಬದುಕು ನೂಕುವ ಅನಿವಾರ್ಯ.

ಗುರುಗಳಿಂದ ಅಂಕಿತವಾಗಿ, ಹಿಂಜರಿಕೆಯಿಂದಲೇ ಒಂದೆರಡು ದೇವರನಾಮ ಬರೆದು ಗುರುಗಳಿಗೆ ತೋರಿಸಿದಾಗ ಅವರಿಂದ ಅಪಾರವಾದ ಪ್ರಶಂಸೆ ಲಭಿಸಿತು. ಕಳೆದುಹೋಗಿದ್ದ ಆತ್ಮಬಲ ಮತ್ತೆ ಕುದುರಿಕೊಂಡಿತು. ಒಳಗೇ ಅಡಗಿದ್ದ ಶಬ್ದ ಸಂಪತ್ತು, ಭಾವ ಸಂಪತ್ತಿಗೆ ಭಕ್ತಿಯ ಸುವರ್ಣದ ಎಳೆಸಿಕ್ಕಂತಾಯಿತು. ಕಾವ್ಯಧಾರೆ ಓತಪ್ರೋತವಾಗಿ ಹರಿಯಿತು. ವರ್ಡ್ಸ್‌ವರ್ತ್ ಕವಿ ಹೇಳುವಂತೆ spontaneous over flow of powerfull feelings ಆಯಿತು. ಇಪ್ಪತ್ತೆಂಟನೇ ವಯಸ್ಸಿನಲ್ಲಿ ಪ್ರಾರಂಭವಾದ ಅವರ ಬರವಣಿಗೆ 42ನೇ ವಯಸ್ಸಿಗೆ ಅಂದರೆ ಕೇವಲ ಹದಿನಾಲ್ಕು ವರ್ಷ ಅವಧಿಯಲ್ಲಿ ಸಾವಿರ ಪುಟಗಳನ್ನೂ ಮೀರಿದೆ ಎಂದರೆ ಇದರ ಓತಪ್ರೋತ ಹರಿವು ಯಾರಿಗಾದರೂ ಅರ್ಥವಾದೀತು. ಈ ಸಾವಿರ ಪುಟಗಳಲ್ಲಿ ಮುನ್ನೂರಕ್ಕೂ ಹೆಚ್ಚು ಮೂರು, ಐದು, ಒಂಬತ್ತು ನುಡಿಗಳ ದೇವರನಾಮಗಳಿವೆ, ನೂರಕ್ಕೂ ಹೆಚ್ಚು ಮುನ್ನೂರು ನಾನೂರು ನುಡಿಗಳ ಖಂಡಕಾವ್ಯಗಳಿವೆ ಮತ್ತು ಚೌಪದಿಯ ಅಥವಾ ಏಳೆ ಛಂದಸ್ಸಿನಲ್ಲಿರುವ ಸರಳ ಕನ್ನಡದ ರಾಮಾಯಣ ಮಹಾಕಾವ್ಯವಿದೆ. ಇದಲ್ಲದೆ ತಮ್ಮ ಗುರು ಚರಿತೆಯನ್ನು ತಿಳಿಸುವ ಗದ್ಯಪ್ರಬಂಧಗಳೂ ಇವೆ.

ಅಂಬಾಬಾಯಿ ಕೇವಲ ಹರಿದಾಸ ಕವಯಿತ್ರಿ ಅಷ್ಟೇ ಅಲ್ಲ, ದಾಸ ಪಂಥವನ್ನೂ, ಹಿರಿಮೆಯನ್ನು ಸಮಾಜದಲ್ಲಿ ಹರಡುವ ಕೈಂಕರ್ಯವನ್ನು ನಿರ್ವಹಿಸುತ್ತಾ ಅಕ್ಷರಶಃ ಹರಿದಾಸರಂತೇ

ಬದುಕು ಕಳೆದಿದ್ದಾರೆ. ತಮ್ಮ ಮೂವತ್ತಾರನೇ ವಯಸ್ಸಿನಲ್ಲಿ ಹೀಗೆ ಊರೂರು ಸುತ್ತುತ್ತಿರುವಾಗ ಅಲ್ಲಿಯ ತಮ್ಮ ಅನುಭವಗಳನ್ನು ದಿನಚರಿಯ ರೂಪದಲ್ಲಿ ಬರೆದಿಟ್ಟಿದ್ದಾರೆ. ಮಹಿಳೆ, ಮೇಲಾಗಿ ಏಕಾಂಗಿನಿ, ತಾರುಣ್ಯ ಜೊತೆಗೆ ಬಡತನ. ಇಂಥ ಮಹಿಳೆಗೆ ರಕ್ಷಣೆಯೆಂದರೆ ಆಕೆ ತಮ್ಮ ಜೊತೆಯಲ್ಲೇ ಕೊಂಡೊಯ್ಯುತ್ತಿದ್ದ ಪುಟ್ಟ ಕೃಷ್ಣವಿಗ್ರಹ ಮಾತ್ರ! ಅವರ ಕಾಲ ಇಂದಿನ ದಿನಗಳಷ್ಟು ಅಭದ್ರವಾಗಿರಲಿಲ್ಲವೇನೋ. ಆದರೂ ಈ ಜೀವ ಅಖಂಡ ಧೈರ್ಯದ ಜೊತೆಯೇ ಪ್ರಯಾಣಿಸುತ್ತಿದ್ದರೂ ಒಳಗೊಂದು ಸಣ್ಣ ಭಯದ ಎಳೆ ಸದಾ ಕಾಡಿದೆ. ಅವರು ಬರೆಯುತ್ತಾರೆ "ಧಾರವಾಡಕ್ಕೆ ಬಂದಾಗ ರಾತ್ರಿ ತೀರಾ ಕತ್ತಲಾಗಿತ್ತು. ಸ್ಟೇಶನ್ನಿನಲ್ಲೆ ಮಲಗಿದ್ದು ಬೆಳಿಗ್ಗೆ ಹೋಗೋಣವೆಂದು ದೇವರೇ ಗತಿ ಎಂದು ಕುಳಿತುಕೊಂಡೆ ಅಲ್ಲಿ ಒಬ್ಬರು ಕೂತಿದ್ದರು. ಸ್ವಲ್ಪ ಹೊತ್ತಿನನಂತರ ಅವರು ವಿಚಾರ ಮಾಡಿ, ತಮ್ಮ ಮನೆಗೆ ಕರೆದುಕೊಂಡುಬಂದರು. ಅವರ ಪತ್ನಿಗೆ ಹೇಳಿ ನನಗೂ ಸ್ಥಳ ಕೊಡಿಸಿದರು. ಸುಖವಾಗಿ ನಿದ್ರೆಬಂತು ಶ್ರೀಕೃಷ್ಣ ಕಾಪಾಡಿದ".

ಎಲ್ಲ ಊರುಗಳಲ್ಲೂ ಪ್ರಸಿದ್ಧ ದೇವಾಲಯಗಳಲ್ಲಿ ರಾತ್ರಿ ಕಳೆಯುವುದು. ಪ್ರತಿದಿನ ಬೆಳಿಗ್ಗೆ ಗೋಪಾಳದ ಮಧುಕರಿ ವೃತ್ತಿ (ಭಿಕ್ಷೆ) ಬೇಡುವುದು. ಕೇವಲ ಐದು ಮನೆಯಲ್ಲಿ ಮಾತ್ರ. ಬಂದ ಧಾನ್ಯವನ್ನು ದೇವಸ್ಥಾನಕ್ಕೇ ಅರ್ಪಿಸಿ ದೇವರ ಪ್ರಸಾದ ತಿಂದು ದಿನ ದೂಡುವುದು. ಇದು ಅವರ ಹರಿದಾಸ ಬದುಕಿನ ರೀತಿ. ಆದರೆ ಇದರ ಮುಖ್ಯ ಬೇಡಿಕೆ 'ನಾನು' ಎನ್ನುವ ಸ್ವಾಭಿಮಾನ ಬಿಡಬೇಕು ಮತ್ತು ಅವಮಾನವಾದರೆ ಅದು ಭಗವಂತನ ಚಿತ್ತ ಎಂದು ಸಹಿಸಬೇಕು. ಈ ಎರಡೂ ಚಿತ್ತವೃತ್ತಿಗಳು ಯಾರಿಗಾದರೂ ತುಂಬಾ ಕಷ್ಟವೇ. ಇಂಥ ನೆಪವನ್ನು ಅವರು "ಸವಣೂರಿನ ಸತ್ಯಭೂದರ ವೃಂದಾವನ ದರ್ಶನಾನಂದವನ್ನು ಹೊಂದಿ ಸ್ವಲ್ಪ ಹೊತ್ತು ಕುಳಿತಿದ್ದೆನು.... ಮಠದವರು ನನ್ನನ್ನು ಊಟಕ್ಕೆ ಕರೆಯಲೇ ಇಲ್ಲ. ಬೇಕಂತ ಬಿಟ್ಟರು.... ಎಲ್ಲರೂ ಊಟ ಮಾಡಿಕೊಂಡು ಹೊರಟುಹೋದರು.... ಅಷ್ಟೊತ್ತಿಗೆ ಪೂಜಾರಿಮನೆಯ ಒಬ್ಬ ಮುತ್ತೈದೆ ಬಂದು, ಆ ಮನುಷ್ಯ (ಮಠದ ಮುಖ್ಯಸ್ಥ) ಒಂದು ತರಹದವನು ನಮಗೆ ಊಟ ಮಾಡಿದರೂ ಉಂಡಹಾಗೆ ಆಗಲಿಲ್ಲ ನೀವಿಲ್ಲಿ ಉಪವಾಸ ಕುಳಿತಿದ್ದೀರಿ. ಬನ್ನಿ ಅಡಿಗೆ ಯಾರೂ ಮುಟ್ಟಿಲ್ಲ ತಂದು ಊಟ ಮಾಡಿ ಎಂದರು". ಹೀಗೆ ದಾಖಲಿಸುತ್ತಾರೆ.

ಸ್ವಂತ ಬದುಕು ಇಷ್ಟೆಲ್ಲ ಒತ್ತಡಗಳಿಂದ ಕೂಡಿದ್ದರೂ ಅವರ ಸಾಹಿತ್ಯ ಮಾತ್ರ ಸಮೃದ್ಧ ಭಕ್ತಿಯನ್ನೂ, ಮನುಷ್ಯ ಪ್ರೀತಿಯನ್ನೂ ಹೊಂದಿದ್ದು ಶ್ರೀಮಂತವಾಗಿವೆ. "ಮುತ್ತೈದೆಯಾಗಿಹೆನು ಮುರಹರನ ದಯದಿ" ಎಂದು ಬರೆಯುತ್ತಾ ಜ್ಞಾನ, ಭಕ್ತಿ ವೈರಾಗ್ಯಗಳೇ ತಮ್ಮ ಜಡೆಯ ಮೂರು ಕಾಲುಗಳೆಂದೂ, ಮುಕ್ತಿ ಪಥವೇ ಮುತ್ತಿನ ಕುಚ್ಚುಗಳೆಂದೂ, ಕೃಷ್ಣನಾಮಸ್ಮರಣೆಯೇ ಕಂಠಾಭರಣವೆಂದೂ, ವಿವರಿಸುತ್ತಾ ನಿಜಜೀವನದಲ್ಲಿ ಅನುಭವಿಸದ ಮುತ್ತೈದೆ ಅಲಂಕಾರಗಳನ್ನು ಅಮೂರ್ತರೂಪಗಳಿಂದ ಶೃಂಗರಿಸಿಕೊಂಡು ಸಂತಸಪಡುತ್ತಾರೆ. ಮಹಿಳೆಯರ ಪ್ರಪಂಚದ ಸಣ್ಣ ಸಣ್ಣ ಸಂತೋಷಗಳಿಂದಲೂ ವಂಚಿತವಾದ ಈ ಮಹಿಳಾ ಮಣಿ ಅನುಭಾವದ ಸುಖದ ಹಾದಿ ಹಿಡಿದು ಬದುಕನ್ನು ಸಹ್ಯವಾಗಿಸಿಕೊಳ್ಳುತ್ತಾರೆ.

ಪುರಂದರದಾಸರು, ಕನಕದಾಸರಂಥ ಮಹಾಮೇರು ಪ್ರತಿಭೆಗಳು ಸ್ಥಾಪಿಸಿದ ಈ ಹರಿದಾಸ ಸಾಹಿತ್ಯವೆಂಬ ಪಥದಲ್ಲಿ ಮುಂದಿನವರು ಹೆಜ್ಜೆಯಿಟ್ಟದ್ದು ಅವರ ನೆರಳಾಗಿ ಮಾತ್ರ. ಆದರೆ ಅಂಬಾಬಾಯಿ ಇದೇ ಪಥದಲ್ಲಿ ನೆರಳಾಗಿಯೇ ನಡೆದರೂ ಅಲ್ಲಲ್ಲಿ ತಮ್ಮದೇ ಸ್ವಂತಿಕೆಯಿಂದ ನವನವೋನ್ಮೇಶ ಶಾಲಿನಿಯಾಗಿಯೂ ಮಿಂಚಿದ್ದಾರೆ. "ಹಚ್ಚಾಡ ಒಗೆಯಬೇಕಮ್ಮ", "ಆಟ ಆಡುವ ಕೂಸು ನಾನು" ಮುಂತಾದ ಕೃತಿಗಳಲ್ಲಿ ಮಹಿಳಾ ಜೀವನದ ಸ್ವಂತ ಅನುಭವಗಳು ತನ್ನಷ್ಟಕ್ಕೆ ತಾನೇ ಪ್ರತಿಮೆಗಳಾಗಿ ಬಳಕೆಯಾಗಿವೆ.

ದಿನಾಂಕ 28-12-2002ರಂದು ಅಂಬಾಬಾಯಿಯ ಜನ್ಮ ಶತಮಾನೋತ್ಸವ ಕಾರ್ಯಕ್ರಮ ಬೆಂಗಳೂರಿನಲ್ಲಿ ನಡೆಯಿತು. ಅವರ ನೂರನಲವತ್ತೆರಡು ದೇವರನಾಮಗಳಿರುವ ಒಂದು ಪುಸ್ತಕ ಈಗಾಗಲೇ ಪ್ರಕಟವಾಗಿದೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಹರಿದಾಸ ಪ್ರಾಜೆಕ್ಟನಡಿಯಲ್ಲಿ ಹೊರತರುತ್ತಿರುವ ನಲವತ್ತೆರಡು ಹರಿದಾಸರ ಬೃಹತ್ ಸಂಪುಟಗಳಲ್ಲಿ ಅಂಬಾಬಾಯಿಯವರ ಸಮಗ್ರ ಕೃತಿಗಳನ್ನು ಡಾ. ಅನಂತಪದ್ಮನಾಭರಾವ್ ಸಂಪಾದನೆಯಲ್ಲಿ ಹೊರತರಲಾಗುತ್ತಿದೆ. ಪ್ರಸಿದ್ಧ ಸಂಗೀತ ವಿದುಷಿ ಟಿ. ಎಸ್. ಸತ್ಯವತಿ ಮತ್ತು ಅವರ ಶಿಷ್ಯವೃಂದ ಪ್ರಸ್ತುತ ಪಡಿಸಿರುವ ಅಂಬಾಬಾಯಿ ರಚಿಸಿದ ಹಾಡುಗಳ ಕ್ಯಾಸೆಟ್ ಬಿಡುಗಡೆಯಾಗಿದೆ. ನಲವತ್ತೆರಡೇ ವರ್ಷ ಬದುಕಿದರೂ ಒಂದು ಜೀವಮಾನದ ಸಾಧ್ಯತೆಯಂತೆ ಸಾವಿರಾರು ಸಾಹಿತ್ಯ ಭಂಡಾರವನ್ನು ಬಿಟ್ಟುಹೋದ ಈ ಹರಿದಾಸ ಕವಯಿತ್ರಿ ಇದುವರೆವಿಗೂ ಅಜ್ಞಾತವಾಗಿಯೇ ಉಳಿದದ್ದು. ಇದೀಗ ಶತಮಾನೋತ್ಸವದ ಸಮಯದಲ್ಲಿ ಪ್ರಾಜ್ಞರ ದೃಷ್ಟಿಗೆ ಬೀಳುತ್ತಿರುವುದು ಮಹಿಳಾಸಾಹಿತ್ಯಕ್ಕೆ ಸಿಗುತ್ತಿರುವ ಪುರಸ್ಕಾರ.

# ಕರ್ನಾಟಕದ ವೈಶಿಷ್ಟತೆ

''ಎಲ್ಲಾದರೂ ಇರು ಎಂತಾದರು ಇರು ಎಂದೆಂದಿಗೂ ನೀ ಕನ್ನಡವಾಗಿರು
ಕನ್ನಡ ಗೋವಿನ ಓ ಮುದ್ದಿನ ಕರು ಕನ್ನಡತನ ಒಂದಿದ್ದರೆ ನೀನೆಮ್ಮಗೆ ಕಲ್ಪತರು''

ಕನ್ನಡ ಕುಲಪುತ್ರರೆಲ್ಲರ ಅವಿರತ ಶ್ರಮ ಮತ್ತು ಮಹತ್ಕಾರ್ಯದ ಫಲವೇ ಏಕೀಕೃತ ಕರ್ನಾಟಕ.

ಈ ಕರ್ನಾಟಕ ಮನ ಪುಳಕಿತಗೊಳಿಸುವ ಪುಣ್ಯಭೂಮಿ. ಅಸಾಧಾರಣವಾದುದನ್ನು ಸಾಧಿಸಲು ಸ್ಫೂರ್ತಿ ನೀಡುವ ನೆಲ, ಕಲೆಗಳ ತವರು, ಸಾಹಿತ್ಯ ಸಂಸ್ಕೃತಿಗಳ ಆಗರ. ಜ್ಞಾನದ ಅಪೂರ್ವ ಭಂಡಾರ. ಪಂಪ, ರನ್ನ, ಪೊನ್ನ, ಜನ್ನರಂತಹ ಕವಿಪುಂಗವರೂ, ಬಸವ, ಅಲ್ಲಮರಂತಹ ಶ್ರೇಷ್ಠ ವಚನಕಾರರೂ, ದಾಸವರೇಣ್ಯರೂ ತಮ್ಮ ತನುಮನಧನಗಳಿಂದ ಕನ್ನಡ ಸಾಹಿತ್ಯ, ಸಂಸ್ಕೃತಿಯನ್ನು ಶ್ರೀಮಂತಗೊಳಿಸಿ ಚಿರಸ್ಮರಣೀಯರಾಗಿದ್ದಾರೆ. ಸಾಹಿತ್ಯ ಕ್ಷೇತ್ರದ ಅತ್ಯುನ್ನತ ಪ್ರಶಸ್ತಿ 'ಜ್ಞಾನಪೀಠ ಪ್ರಶಸ್ತಿ'' ವಿಜೇತರಾದ ಕುವೆಂಪು, ದ.ರಾ. ಬೇಂದ್ರೆ, ಮಾಸ್ತಿ ವೆಂಕಟೇಶ್ ಅಯ್ಯಂಗಾರ್, ಶಿವರಾಮ ಕಾರಂತ, ವಿ.ಕೃ ಗೋಕಾಕ್, ಯು.ಆರ್. ಅನಂತಮೂರ್ತಿ, ಗಿರೀಶ್ ಕಾರ್ನಾಡ್‌ರಂತಹ ಖ್ಯಾತ ಸಾಹಿತಿಗಳು, ಕಲಾವಿದರು, ಸಂಗೀತಜ್ಞರು, ವಿಜ್ಞಾನಿಗಳು, ಕ್ರೀಡಾ ಪಟುಗಳು ತಮ್ಮ ಅಪ್ರತಿಮ ಸಾಧನೆಗಳಿಂದ ವಿಶ್ವಭೂಪಟದಲ್ಲಿ ಕರ್ನಾಟಕದ ಛಾಪು ಮೂಡಿಸಿರುವುದು ನಾಡಿನ ಜನತೆ ಹೆಮ್ಮೆ ಪಡುವ ಸಂಗತಿ.

ಇಂತಹ ಶ್ರೇಷ್ಠ ಸಾಹಿತ್ಯ ಮತ್ತು ಸಂಸ್ಕೃತಿಯ ವಾರಸುದಾರರಾದ ನಾವು ಕನ್ನಡಾಂಬೆಯ ಕೀರ್ತಿ ಎಲ್ಲೆಡೆ ಮೊಳಗುವಂತೆ ಕಾರ್ಯತತ್ಪರಾಗೋಣ. ಭಾವೈಕ್ಯತೆಯನ್ನು ಬೆಳಗೋಣ.

*- ಕರ್ನಾಟಕ ವಾರ್ತೆ*

# ಒಡಲ ನೋವಿಗೆ ಹಿಡಿದ ಕನ್ನಡಿ

**- ಜಿ. ಎನ್. ಮೋಹನ್**




| | | |
|---|---|---|
| ಒಡಲ ನೋವಿನ ತೊಟ್ಟಿಲ ಹಾಡು | | |
| ಲೇಖಕರು | : | ಶಿವಾನಂದ ಕಳವೆ |
| ಪ್ರಕಾಶಕರು | : | ಮಿತ್ರ ಮಾಧ್ಯಮ, ಬೆಂಗಳೂರು |
| ಬೆಲೆ : 24 ರೂ. | | |

ಪತ್ರಿಕೋದ್ಯಮದಲ್ಲಿ ಭಿನ್ನಜಾಡು ಹಿಡಿದು ಹೊರಟಿರುವ ಶಿವಾನಂದ ಕಳವೆ ಈಗ ಮತ್ತೊಂದು ಕಹಿ ಸತ್ಯವನ್ನು ಹೊರಹಾಕಿದ್ದಾರೆ. 'ಒಡಲ ನೋವಿನ ತೊಟ್ಟಿಲ ಹಾಡು' ಮಹಿಳೆಯ ಆರೋಗ್ಯವನ್ನು ಕೇಂದ್ರೀಕರಿಸಿ ನಡೆಸಿದ ಅಧ್ಯಯನದ ವರದಿ.

ಶಿವಾನಂದ ಕಳವೆ ಪತ್ರಿಕೋದ್ಯಮದ ಎಂದಿನ 5W+IH ಸೂತ್ರಕ್ಕೆ ಜೋತು ಬಿದ್ದವರಲ್ಲ. ಬದಲಿಗೆ ಪತ್ರಿಕೋದ್ಯಮವೆಂಬ ಪ್ರಭಾವಿ ಅಂಗವನ್ನು ಜನರ ನಿಟ್ಟುಸಿರುಗಳನ್ನು ಪರಿಚಯಿಸಲು ಹೇಗೆ ಸಮರ್ಥವಾಗಿ ಬಳಸಿಕೊಳ್ಳಬಹುದು ಎಂಬ ಅರಿವು ಇರುವವರು. ಹೀಗಾಗಿಯೇ ಇವರ ಬರಹ, ಅಧ್ಯಯನ ಸದಾ ಕುತೂಹಲಕಾರಿ. ಈ ಹಿಂದೆ ಇವರು ಹೊರತಂದ 'ಕಾಡುನೆಲದ ಕಾಲಮಾನ' ಸಹಾ ಇಂತಹದೇ ಭಿನ್ನ ನೋಟ ಉಳ್ಳದ್ದು. ಈಸ್ಟ್ ಇಂಡಿಯಾ ಕಂಪನಿಯ ಅಧಿಕಾರಿ ಡಾ. ಫ್ರಾನ್ಸಿಸ್ ಬುಕಾನನ್ ಅವರು ಉತ್ತರ ಕನ್ನಡದಲ್ಲಿ ಸಂಚರಿಸಿದ ಮಾರ್ಗವನ್ನೇ ಇವರು 200 ವರ್ಷಗಳ ನಂತರ ಬೆನ್ನತ್ತಿದರು. ಬುಕಾನನ್ ಯಾವೆಲ್ಲಾ ಉದ್ದೇಶದಿಂದ ಈ ಹಾದಿಯಲ್ಲಿ ಸರಿದು ಹೋದರೋ ಗೊತ್ತಿಲ್ಲ. ಆದರೆ ಕಳವೆಗೆ ಒಂದು ಉದ್ದೇಶ ಇತ್ತು. ಉತ್ತರ ಕನ್ನಡದ ಅಧಿಕೃತ ದಾಖಲೆಗಳಲ್ಲಿ ಕಾಣಸಿಗದ ಬದುಕು ಇವರ ಪಯಣದಲ್ಲಿ ದಾಖಲಾದವು. ಕಳವೆ ಈ ಪಯಣದ ಮೂಲಕ ಪತ್ರಿಕೋದ್ಯಮದಲ್ಲಿಯೂ ಒಂದು ಹೊಸ ಸಂಚಾರ ನಡೆಸಿದರು ಎಂದೇ ಹೇಳಬೇಕು. ಹಾಗಾಗಿ ನನಗಂತೂ ಕಳವೆ ಬರಹಗಳು ಸದಾ ಆಸಕ್ತಿ ಕೆರಳಿಸುತ್ತದೆ.

ಪತ್ರಿಕೋದ್ಯಮ ಎಂಬುದು ಸರ್ಕಾರ ಮತ್ತು ಸದ್ಗುಣದ ನಡುವೆ ಇರುವ ಸೇತುವೆ ಎಂಬುದೇ ಮರೆತು ಹೋಗುತ್ತಿರುವ ಈ ದಿನಗಳಲ್ಲಿ ಕಳವೆ ಈ ಎರಡರ ನಡುವಿನ ಮುಖ್ಯ ಕೊಂಡಿಯಾಗಿದ್ದಾರೆ. ಬೆಲೆ ಇಳಿಕೆಯ, ಜಾಹಿರಾತು ಗಳಿಕೆಯ ಇಂದಿನ ಪತ್ರಿಕೋದ್ಯಮದ ನಡುವೆ ಭರವಸೆಯಾಗಿ ಉಳಿದಿದ್ದಾರೆ.

'ಒಡಲ ನೋವಿನ ತೊಟ್ಟಿಲ ಹಾಡು' ಉತ್ತರ ಕನ್ನಡ ಜಿಲ್ಲೆಯ ಬುಡಕಟ್ಟು ಮಹಿಳೆಯರ ಆರೋಗ್ಯಸ್ಥಿತಿಯ ಬಗ್ಗೆ ಕೈಗೊಂಡ ಅಧ್ಯಯನ. ಈ ಅಧ್ಯಯನಕ್ಕೆ ಪ್ಯಾನೋಸ್ ಫೆಲೋಶಿಪ್‌ನ ಬೆಂಬಲ ಇತ್ತು. ಈ ತೊಟ್ಟಿಲ ಹಾಡು 36, ಮತ್ತೆರಡು ಪುಟಗಳ ಪುಟ್ಟ ಪುಸ್ತಕ. ಆದರೆ ಇದು ಜಾಗತೀಕರಣದ ಉಬ್ಬರದಲ್ಲಿ ಎಲ್ಲದರೊಂದಿಗೆ ನಾನೂ ಸಮಾನ ಸ್ಪರ್ಧಿ ಎಂದು ತೊಡೆತಟ್ಟಿ ನಿಂತಿರುವ ಭಾರತದ ಕರಾಳ ಕಥೆಯನ್ನು ಹೊರಹಾಕುತ್ತದೆ. ಬೆಳಕಿನ ಹಿಂದೆ ಬಚ್ಚಿಟ್ಟ ಕತ್ತಲನ್ನು ಹೊರಗೆಳೆಯಲಾಗಿದೆ.

ಉತ್ತರ ಕನ್ನಡದ ಬುಡಕಟ್ಟು ಮಹಿಳೆಯರ ಮನೆಗಳಲ್ಲಿ ಮಗು ಹುಟ್ಟಿ ಅದಕ್ಕಾಗಿ ತೊಟ್ಟಿಲು ಕಟ್ಟಿ ಹಾಡು ಆರಂಭಿಸಿದರೆ ಅದು ಮುಕ್ತಾಯವಾಗುವುದೇ ಇಲ್ಲ. ಏಕೆಂದರೆ ಹಾಡು ಆರಂಭಿಸಿದ ಅರ್ಧಕ್ಕೇ ಮಗು ಅಸು ನೀಗಿರುತ್ತದೆ. ಇದಕ್ಕೆ ಕಾರಣ ಹುಡುಕಹೊರಟಾಗ ಹೊರಬಂದದ್ದು ಈ 'ಒಡಲ ನೋವಿನ ತೊಟ್ಟಿಲ ಹಾಡು'.

ಮಗುವಿಗೆ ಯಾವ ವಯಸ್ಸಿನಲ್ಲಿ ಮದುವೆ ಮಾಡಬೇಕು, ಸುರಕ್ಷಿತ ತಾಯ್ತನ ಎಂದರೇನು? ಸರಿಯಾದ ಚಿಕಿತ್ಸೆ ಎಂದರೆ ಯಾವುದು, ಗರ್ಭನಿರೋಧಕ ಕ್ರಮ ಹೇಗೆ? ಕುಟುಂಬ ಕಲ್ಯಾಣ ಯೋಜನೆ ಹೇಗೆ ಜಾರಿಮಾಡಬೇಕು ಎಂಬುದು ಈ ಹಾಡಿಗಳಲ್ಲಿ, ಭಾರತದ ಇಂತಹ ನೂರಾರು ಗ್ರಾಮಗಳಲ್ಲಿ ಕತ್ತಲಲ್ಲಿ ಉಳಿದುಹೋಗಿದೆ.

ಒಂದಷ್ಟು ಉದಾಹರಣೆ ಗಮನಿಸಿ :-

ಗೌಳಿ ಜನಾಂಗದ ಜಾನೂ ಕೊಕರೆ ಪ್ರಕಾರ ಮದುವೆಯಾದವರು ಮಕ್ಕಳನ್ನು ಹೆರುವುದರಲ್ಲಿ ತಪ್ಪೇನಿಲ್ಲ. ಏಕೆಂದರೆ ಇವರು ಮದುವೆ ಮಾಡಿರುವುದೇ ಮಕ್ಕಳು ಹೆರಲಿಕ್ಕೆ.

ಇವರ ಪ್ರಕಾರ ಮದುವೆ ಆಗಬೇಕಾಗಿರುವುದು ಹುಡುಗಿ ರಜಸ್ವಲೆ ಆಗುವುದರೊಳಗೆ. ಅದೇ ಪವಿತ್ರ ಮದುವೆ.

ರಜಸ್ವಲೆ ಆಗುವುದರೊಳಗೆ ಅಂದರೆ? - ಗೌಳಿಗಳಿರುವ ಹಳ್ಳಿಯಲ್ಲಿ ಸಾಮೂಹಿಕ ಮದುವೆ ನಡೆಯುತ್ತದೆ. ಐದಾರು ವರ್ಷದ ಬಾಲೆಯರು ಹಸೆಮಣೆ ಮೇಲೆ. ಇದು ಕಥೆಯಂತೆ ಕಾಣುತ್ತದೆಯೇ? ಹಾಗಾದರೆ ಈ ಪ್ರಕರಣ ನೋಡಿ - 11ರ ಬಾಲಕಿ ನಾಗೂಬಾಯಿಗೆ ಮದುವೆ ಗೊತ್ತಾಯಿತು. ಆಕೆಯ ಇಬ್ಬರು ತಂಗಿಯರಾದ 9 ವರ್ಷದ ಗಂಗೂಬಾಯಿ 7 ವರ್ಷದ ಜನ್ನಾಬಾಯಿಗೂ ಲಗ್ನ ಮಾಡುವುದು ಸರಿ ಎಂದು ತಂದೆ ರಾಮು ಲೆಕ್ಕ ಹಾಕಿದ. ಮೂವರು ಮಕ್ಕಳ ಮದುವೆಯನ್ನು ಒಟ್ಟಿಗೇ ಮಾಡಿ 'ಮುಗಿಸಿದ'.

ಕಾರಕುಂಡಿ, ಕ್ವಾಣಮಡ್ಡಿ, ಬಡ್ಡಿಗೇರಿಯಲ್ಲಿ 1600 ಜನಸಂಖ್ಯೆ. 18 ವರ್ಷದ ಒಳಗೆ ಮದುವೆಯಾಗದವರ ಸಂಖ್ಯೆ ಎರಡು ಅಥವಾ ಮೂರು ಮಾತ್ರ.

ಒಬ್ಬ ಗೌಳಿ ಮಹಿಳೆಗೆ 4 ಮಕ್ಕಳು ಇದ್ದಾರೆ ಎಂದರೆ ಈಕೆ 6-7 ಬಾರಿ ಗರ್ಭ ಧರಿಸಿದ್ದಾಳೆ ಎಂದೇ ಅರ್ಥ.

ಗೌಳಿಗರ ಕೇರಿಯಲ್ಲಿ ಓಡಾಡುವಾಗ ಹೆಣ್ಣು ಮಕ್ಕಳು ಸಿಕ್ಕರೆ ಯಾವ ಶಾಲೆ ಎಂದು ಕೇಳಬಾರದು 'ನಿನಗೆ ಈಗ ಎಷ್ಟು ಮಕ್ಕಳು? ಗರ್ಭಪಾತ ಆಗಿದೆಯೇ?'

ಇದು ವಾಸ್ತವ.

ಗರ್ಭಪಾತವಾದಾಗ ವೈದ್ಯರ ಬಳಿಗೆ ಬರುವುದು ಗಂಡ. ಅದೂ ವಾರಕ್ಕೊಮ್ಮೆ ಸಂತೆ ಸೇರಿದಾಗ - ಗರ್ಭಪಾತವಾದಾಗಲ್ಲ. ಹೆರಿಗೆ ನಡೆಯುವುದಾದರೆ ಅದು ಸೂಲಗಿತ್ತಿಯರಿಂದಲೇ, ಶೇ 65ರಷ್ಟು ಹೆರಿಗೆ ತರಬೇತಿ ಇಲ್ಲದ ಸೂಲಗಿತ್ತಿಯರಿಂದ ನಡೆಯುತ್ತದೆ.

ಬಾಣಂತಿಗೆ ಪ್ರಜ್ಞೆತಪ್ಪಿದರೆ ತಲೆ ಕೂದಲಿಗೆ ಹಗ್ಗ ಬಿಗಿದು ಕತ್ತಲ ಕೋಣೆಯ ತೊಲೆಗೆ ನೇತು ಹಾಕಲಾಗುತ್ತದೆ. ಇದು ಎಷ್ಟೋ ಬಾರಿ ಸಾವಿನಲ್ಲಿ ಮುಕ್ತಾಯವಾಗುತ್ತದೆ. ಈ ಬಗ್ಗೆ ಪತ್ರಿಕೆಯೊಂದು ಬರೆದಾಗ ವಿಧಾನಸಭೆಯಲ್ಲಿ ದೊಡ್ಡಗದ್ದಲ. ತನಿಖೆಗೆ ಆರೋಗ್ಯಾಧಿಕಾರಿಗಳ ತಂಡ ಈ ತಾಂಡಾಕ್ಕೆ ಹೇಳಿದ್ದು - 'ನೀವು ಬಾಣಂತಿಯನ್ನು ನೇತುಹಾಕುವ ವಿಚಾರ ಪೇಪರ್‌ನವರಿಗೆ ಯಾಕೆ ಹೇಳಿದಿರಿ. ಇದರಿಂದ ಎಲ್ಲರಿಗೂ ತೊಂದರೆ.'

ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ ರಾಜ್ಯದ 6 ಗುಡ್ಡಗಾಡು ಜಿಲ್ಲೆಯಲ್ಲಿ ಗರ್ಭಿಣಿ, ಬಾಣಂತಿಯರು ಹಾಗೂ 6 ವರ್ಷದೊಳಗಿನ ಮಕ್ಕಳಿಗೆ ಪೌಷ್ಟಿಕ ಆಹಾರ ಪೂರೈಸಲು ಯೋಜನೆಯೊಂದನ್ನು ಜಾರಿಗೆ ತಂದಿತು. 30.90 ಲಕ್ಷರೂ ತೆಗೆದಿಟ್ಟಿತು. ವಿನಿಯೋಗವಾಗಿದ್ದು 10 ಲಕ್ಷರೂ ಮಾತ್ರ. ಸರ್ಕಾರದ ಕಡತ ತಿರುವಿ ಹಾಕಿದರೆ ಈ ಪ್ರಕಾರ ಎಲ್ಲೋ ಅಲ್ಲಲ್ಲಿ ಮಾತ್ರ ಸಮಸ್ಯೆ ಇದೆ. ಉಳಿದೆಯೆಡೆಲ್ಲಾ 'ಇಲ್ಲಿ ಎಲ್ಲರೂ ಸುಖವಾಗಿದ್ದಾರೆ ಪ್ರಭೂ..." ಎಂಬ ಮಾತು ಮಾತ್ರ.

ಬುಡಕಟ್ಟು ಜನರು ತಮ್ಮ ಹೆಣ್ಣು ಮಕ್ಕಳಿಗೆ ಪೇಟೆ ಡಾಕ್ಟ್ರ ಬಳಿ ಚಿಕಿತ್ಸೆ ನೀಡಿಸುತ್ತಿದ್ದೇವೆ ಎಂಬ ಹೆಮ್ಮೆ. ಈ ಪೇಟೆಡಾಕ್ಟ್ರು ಯಾರು? - ಗಾಳಿ, ಬೆಳಕು ಇಲ್ಲದ ಮನೆಯಲ್ಲಿ ಬೇನಾಮಿ ಸಂಸ್ಥೆಗಳು ನೀಡುವ ಸರ್ಟಿಫಿಕೇಟ್ ತೂಗು ಹಾಕಿಕೊಂಡವರು. ಕೆಲವು ಔಷಧಗಳನ್ನು ನಿಗಧಿತ ಉಷ್ಣಾಂಶದಲ್ಲಿ ಫ್ರಿಜ್‌ನಲ್ಲಿ ಇಡಬೇಕು. ಆದರೆ ಇವರ ಚಿಕಿತ್ಸಾಲಯಕ್ಕೇ ವಿದ್ಯುತ್ ಇಲ್ಲ. ಔಷಧ ಕೆಡಬಾರದೆಂದು ತಣ್ಣೀರಲ್ಲಿಟ್ಟಿದ್ದರು. ಕೆಂಪುಗುಳಿಗೆ, ಕೆಂಪುಬಣ್ಣದ ಇಂಜೆಕ್ಷನ್ ಕೊಟ್ಟರೆ ಮಾತ್ರ ಒಳ್ಳೆ ವೈದ್ಯ ಎನ್ನುತ್ತಾರೆ. ಹಾಗಾಗಿ ನಾನೂ ಅದನ್ನೇ ನೀಡುತ್ತೇನೆ ಎನ್ನುವ ಪ್ರಾಮಾಣಿಕ.

ಹಾಗಾದರೆ ಹಳ್ಳಿ ಡಾಕ್ಟ್ರು ಯಾರು? - ಹಳ್ಳಿಯಲ್ಲಿ ರೇಷನ್ ಅಂಗಡಿಯಲ್ಲಿ ಕೆಲಸ ಮಾಡುತ್ತಿದ್ದ ವ್ಯಕ್ತಿ ಕಾಲ ಕಳೆಯಲು ಒಬ್ಬ ವೈದ್ಯರ ಬಳಿ ಹೋದರು. ಒಂದು ತಿಂಗಳ ಕಾಲ ಇದ್ದರು. ಈಗ ಅವರೇ ಡಾಕ್ಟ್ರು. ಅವರ ಟೇಬಲ್ ಮೇಲೆ ಇದ್ದದ್ದೆಲ್ಲಾ ಅವಧಿ ಮೀರಿದ ಔಷಧಿಗಳು. ಸರ್ಟಿಫಿಕೇಟ್ ಇಲ್ಲ.

ಹಾಗಾದರೆ ಜನಪ್ರತಿನಿಧಿಗಳು ಇವರನ್ನು ಹೇಗೆ ಬಿಟ್ಟಿದ್ದಾರೆ. ಪ್ರಶ್ನೆ ಎದುರಾಗುತ್ತದೆಯೇ? - ಈ ಹಳ್ಳಿ ಡಾಕ್ಟ್ರು ಬಳಿ ಒಂದು ಸರ್ಟಿಫಿಕೇಟ್ ಇದೆ. ಎಂ.ಎಲ್.ಎ. ಕೊಟ್ಟದ್ದು. ಈ ಹಾಡಿಯ ಹಳ್ಳಿಯಲ್ಲಿ ಯಾರೂ ವೈದ್ಯರಿಲ್ಲದ ಕಾರಣ ಶ್ರೀ... ಇವರು ವೈದ್ಯಕೀಯ ವೃತ್ತಿ ಮಾಡಬಹುದೆಂದು ನಾನು ಶಿಫಾರಸು ಮಾಡುತ್ತೇನೆ.

ಹೀಗೆ ಶಿವಾನಂದ ಕಳವೆಯ ಪುಟ್ಟಪುಸ್ತಕ ದೊಡ್ಡ ಭಯಾನಕ ಸತ್ಯವನ್ನು ಮುಂದಿಡುತ್ತದೆ. ಕಳವೆ ಅವರಿಗಿರುವ ಗ್ರಾಮೀಣ ಕಾಳಜಿ ಇವರ ಪುಸ್ತಕದಲ್ಲಿ ವ್ಯಕ್ತವಾಗುತ್ತದೆ. ಕಳವೆ ಅವರಿಗೆ ಬರವಣಿಗೆ ಸಲೀಸಾಗಿ ಸಿದ್ಧಿಸಿದೆ. ತಾವು ಹೇಳುತ್ತಿರುವ ಅಂಶಗಳನ್ನು ತಮ್ಮ ವಿಶಿಷ್ಟ ಬರಹದ ಶೈಲಿಯ ಮೂಲಕ ಸರಿಯಾಗಿ ನಾಟುವಂತೆ ಮಾಡುತ್ತಾರೆ. ಅಂಕಿ ಅಂಶಗಳಿಂದ ಹೊರಬಂದು, ಹೇಳಬೇಕಾದ ವಿಚಾರಗಳಿಗೆ ಇನ್ನಷ್ಟು ಸ್ಪಷ್ಟತೆ ಸಿಕ್ಕರೆ ಕಳವೆ ಬಹುಷಃ ಕನ್ನಡ ಪತ್ರಿಕೋದ್ಯಮದಲ್ಲಿ ಒಂದು ಹೊಸ ಛಾಪು ಮೂಡಿಸುತ್ತಾರೆ.

○

# ಮಹಿಳೆಯ ಮೂಕಯಾತನೆ

- ಶಶಿಕಲಾ ಬೆಳಗಲಿ

ಮಹಾತ್ಮಾ ಗಾಂಧೀಜಿಯವರಿಗೆ ಒಂದು ಕನಸಿತ್ತು. ಅದನ್ನು ನನಸಾಗಿಸುವ ಆಶೆಯನ್ನು ಹೊಂದಿದ್ದರು. ಆದರೆ ಅಲ್ಲಿಯವರೆಗೂ ಅವರು ಬದುಕಲಿಲ್ಲ. ದುರಂತವೆಂದರೆ, ಗಾಂಧೀಜಿ ಬಲಿಯಾಗಿ, ದೇಶ ಸ್ವತಂತ್ರ್ಯಗೊಂಡು 55 ವರ್ಷಗಳಾದರೂ ಕನಸು ಕನಸಾಗಿಯೆ ಉಳಿದಿದೆ. ಅದೇನು ಅಂತಹ ಅಸಾಧ್ಯವಾದುದೇನಲ್ಲ "ಮಹಿಳೆಯೊಬ್ಬಳು ರಾತ್ರಿ ಎಂಟು ಗಂಟೆಯ ನಂತರ ನಿರ್ಭೀಡೆಯಾಗಿ ನಡೆಯಬೇಕು" ಎಂಬುದಷ್ಟೇ.

ಆದರೆ, ಇಂದಿನ ದಿನಮಾನಗಳಲ್ಲಿ, ಇದು ಅಸಾಧ್ಯ ಎನ್ನುವ ವಾತಾವರಣ ನಿರ್ಮಾಣವಾಗಿದೆ. ಕಳೆದ ವರ್ಷದ ಸ್ವಾತಂತ್ರೋತ್ಸವದ ಹಿಂದಿನ ರಾತ್ರಿಯೇ 10 ವರ್ಷದ ಹುಡುಗಿಯೊಬ್ಬಳು ಕಾಮುಕನಿಗೆ ಬಲಿಯಾದಳು. ಮುಂಬೈಯ ಲೋಕಲ್ ಟ್ರೈನ್‌ನಲ್ಲಿ ಈ ಮೂಕಿ ಹುಡುಗಿ ಬಂದು ಕುಳಿತದ್ದೇ ತಡ, ಒಬ್ಬ ಕುಡುಕ ಅವಳನ್ನು ಕಾಡಲು ಶುರು ಮಾಡಿದ. ಪಾರಾಗಲೂ ಎಷ್ಟೇ ಪ್ರಯತ್ನಪಟ್ಟರೂ, ಆತನ ಕಾಮತೃಷೆಗೆ ತುತ್ತಾಗಬೇಕಾಯಿತು. ಅದು ನಿರ್ಜನ ಪ್ರದೇಶವಾಗಿರಲಿಲ್ಲ. ಅಲ್ಲಿ ಐದು ಪುರುಷರು ಇದ್ದರು. ಅದರಲ್ಲಿ ಆಂಗ್ಲಪತ್ರಿಕೆಯ ವರದಿಗಾರನೂ ಇದ್ದ. ಇಂತಹ ಹೀನ ಕೃತ್ಯಕ್ಕೆ ಮೂಕ ಸಾಕ್ಷಿಗಳಾದರು. ಆದರೆ ಯಾರೊಬ್ಬರು ಪ್ರತಿಭಟಿಸಲಿಲ್ಲ - ಹುಡುಗಿ ನೋವಿನಿಂದ ನರಳುತ್ತಲೇ ಇದ್ದಳು, ಕುಡುಕ ಟ್ರೈನ್‌ನಿಂದ ಇಳಿದು ಕತ್ತಲಿನಲ್ಲಿ ಹೋಗುತ್ತಲೇ ಇದ್ದ.

ಪರಿಸ್ಥಿತಿ ಹೀಗಿರುವಾಗ, ಗಾಂಧೀಜಿ ಕನಸು ಬಗ್ಗೆ ಯೋಚಿಸುವುದಂತೂ ಕಷ್ಟ ಮಾತು. ಭಾರತದಲ್ಲಿ ದಿವಸಕ್ಕೆ, 54 ಮಹಿಳೆಯರು 35 ನಿಮಿಷಕ್ಕೊಂದರಂತೆ ಅತ್ಯಾಚಾರಕ್ಕೊಳಗಾಗುತ್ತಿದ್ದಾರೆ. ಕಳೆದ ವರ್ಷ, ಮುಂಬೈ ಹಾಗೂ ದೆಹಲಿಯಲ್ಲಿ 266 ಹಾಗೂ 127 ಪ್ರಕರಣಗಳು ಬೆಳಕಿಗೆ ಬಂದವು. ಇನ್ನು ಉಳಿದವಂತೂ, ಹೊರಗೂ ಬರಲಿಲ್ಲ, ಬೆಳಕು ಕಾಣಲಿಲ್ಲ.

ಇತ್ತೀಚಿನ ದಿನಗಳಲ್ಲಂತೂ, ದಿನಪತ್ರಿಕೆಗಳ ಮೂಲೆ ಮೂಲೆಗಳಲ್ಲಿ 'ಮಹಿಳೆಯ ಮಾನಭಂಗ' ಅಥವಾ 'ವರದಕ್ಷಿಣೆ ಸಾವು' ಎಂಬ ಸುದ್ದಿ ಕಂಡು ಬರುವುದು ಸಹಜವಾಗಿದೆ. ಮುದ್ರಣ ಮಾಧ್ಯಮದ ಪರಿಸ್ಥಿತಿ ಹೀಗಿದ್ದರೆ, ದೃಶ್ಯ ಮಾಧ್ಯಮದಲ್ಲಂತೂ ಅವಳ ದೇಹ-ಆರಾಧನೆ ಮಾಡುವುದು, ಅಶ್ಲೀಲವಾಗಿ ಚಿತ್ರಿಸುವುದು ಸಾಮಾನ್ಯ ಸಂಗತಿಯಾಗಿದೆ. ಇವತ್ತಿನ ದುಸ್ಥಿತಿ ಹೀಗಿರುವಾಗ, ಒಬ್ಬ ಮಹಿಳೆ ಬದುಕುವುದಾದರೂ ಹೇಗೆ?

ಭಾರತಕ್ಕೆ ಸ್ವಾತಂತ್ರ ಬಂದು 55 ವರ್ಷಗಳಾದರೂ ಮಹಿಳೆ ತನ್ನದೇ ಆದ ಅಸ್ತಿತ್ವವನ್ನು ಗಳಿಸಲು ವಿಫಲರಾಗಿದ್ದಾಳೆ. ಇದಕ್ಕೆ ಯಾರು ಹೊಣೆ? - ಅನಿಷ್ಠ ಪದ್ಧತಿಗಳೇ ಅಥವಾ ಪುರುಷ ಪ್ರಧಾನ ಸಮಾಜದ ಒತ್ತಡವೇ. ಉತ್ತರ ಸ್ಪಷ್ಟ . ಇಬ್ಬರಿಂದಲೂ. ಬಾಲ್ಯವಿವಾಹ, ಸತಿ ಪದ್ಧತಿ ಮುಂತಾದ ಅನಿಷ್ಠ ಪದ್ದತಿಗಳು ಅವಳಿಗೆ ತನ್ನದೇ ಆದ ಜೀವನವನ್ನು ಸವಿಯಲು ಅವಕಾಶ ಮಾಡಿಕೊಡಲಿಲ್ಲ. ಯಾವುದೋ ಒಂದು ಕಾಲದಲ್ಲಿ ಸಮಾಜ ಸುಧಾರಕ ರಾಜಾ ರಾಮ ಮೋಹನರಾಯ್ ಇಂತಹವುಗಳ ವಿರುದ್ಧ ಪ್ರತಿಭಟಿಸಿ, ಸಿಂಹಸ್ವಪ್ನದ ರೂಪದಲ್ಲಿ ಅವುಗಳನ್ನು ತಡೆದರು. ಇದು ಮುಂದುವರೆಯದಂತೆ, ಕಾನೂನು ಸಹ ತರಲಾಗಿತ್ತು. ಆದರೆ, ಅದು ಪಾಲನೆಯಾಗದಿರುವುದು ನಿಜಕ್ಕೂ ದುರದೃಷ್ಟಕರವಾದದ್ದು. ಮೊನ್ನೆ ಮೊನ್ನೆ 1983ರಲ್ಲಿ ರೂಪಾಕನ್ವರ್ ಎಂಬುವವಳು ಸತಿ ಪದ್ಧತಿಗೆ ಬಲಿಪಶುವಾದಳು. ಗಂಡ ಸತ್ತಿದ್ದಾನೆ, ಇನ್ನೂ ನಿನಗೆ ಜೀವಿಸುವ ಹಕ್ಕಿಲ್ಲ ಎಂಬ ಏಕಮೇವ ಕಾರಣದಿಂದಾಗಿ ಊರಿನ ಕೆಲ ಗ್ರಾಮಸ್ಥರು ಅವಳನ್ನು ಅವಳ ಪತಿಯ ಶವ ಸುಡುತ್ತಿರುವ ಬೆಂಕಿಗೆ ನೂಕಿದರು.

ಇನ್ನೊಂದೆಡೆ, ಯಾವನೋ ಒಬ್ಬ 'ಮನು' ಎಂಬಾತ 'ಮಹಾ' ಗ್ರಂಥದಲ್ಲಿ ಮಹಿಳೆಯ ಬಗ್ಗೆ ಬರೆದಿರುವ ರೂಪದಲ್ಲಿಯೇ ಪುರುಷ ಸಮಾಜ ನೋಡಲು ಇಷ್ಟಪಟ್ಟಿತು. ಮನು ಹೇಳಿದ್ದೇ ವೇದ-ವಾಕ್ಯ ಎಂಬುವ ರೀತಿಯಲ್ಲಿ ಪಾಲಿಸಲು ಹಂಬಲಿಸಿತು. ಮಹಿಳೆಗೆ ತನ್ನ ಇಷ್ಟದಂತೆ ಜೀವಿಸಲು ಯಾವುದೇ ಹಕ್ಕಿಲ್ಲ- ಪುರುಷನೇ - ಅವಳಿಗೆ ಗತಿ. ಅಪ್ಪ, ಗಂಡ ಹಾಗೂ ಮಕ್ಕಳ ಆರೈಕೆ ಹಾಗೂ ಆಶ್ರಯದಲ್ಲೇ ಜೀವನವೆಂಬ ಕಪ್ಪಟ್ಟಣೆ ವಿಧಿಸಿದರು. ನಾಲ್ಕು ಗೋಡೆಯ ಅಡುಗೆ ಮನೆಯೊಳಗೆ ಅವಳ ವಾಸ. ಹೀಗಿದ್ದರೂ, ಮಹಿಳೆ ಎಚ್ಚರಗೊಂಡು, ಇವರೆಲ್ಲದರ ವಿರುದ್ಧ ಮೆಟ್ಟಿ ನಿಲ್ಲಲಿಕ್ಕೆ 55 ವರ್ಷಗಳು ಬೇಕಾಯಿತಾದರೂ, ಜಯ ಸಂಪೂರ್ಣವಾಗಿ ದೊರೆತಿಲ್ಲ.

ಇದಕ್ಕೆ ಒಂದು ಉದಾಹರಣೆ. ಕೇಂದ್ರ ಸರಕಾರ ಮಹಿಳೆಯರ ಅಭಿವೃದ್ಧಿ ಬಗೆ ಸಾಕಷ್ಟು ತಲೆ ಕೆಡಿಸಿಕೊಂಡಿದೆ - ಕಾರ್ಯ ಚಟುವಟಿಕೆ ಮಾಡುತ್ತಿದೆ. ಮಹಿಳೆಯರಿಗೆ ಉನ್ನತ - ತಂತ್ರಜ್ಞಾನ ಕುರಿತು ಉನ್ನತ ಶಿಕ್ಷಣ ಗಳಿಸಲು ಅನುವು ಮಾಡಿಕೊಡುವುದರ ಬದಲು 'ಗೃಹ-ವಿಜ್ಞಾನ' ಎಂಬ ವಿಷಯದೆಡೆಗೆ ಹೆಚ್ಚಿನ ಗಮನ ನೀಡಿ ಅಡುಗೆ ಮಾಡುವುದು - ಹೀಗೆ ಮುಂತಾದವುಗಳು. ಮನು ಹೇಳಿದಂತೆ, ಸರ್ಕಾರ ಮಹಿಳೆಯನ್ನು ನಾಲ್ಕು ಗೋಡೆಯೊಳಗೆ ಕೂಡಿಡುವುದನ್ನು ಅಕ್ಷರಶಃ ಪಾಲಿಸುತ್ತಿದೆ.

ಸಮಾಜದಲ್ಲಿ ಯಾರು ಎಷ್ಟೇ ದುಃಖಿಕ್ಕೊಳಗಾದರೂ, ಕಷ್ಟ ಅನುಭವಿಸಿದರೂ, ಒಬ್ಬ ಮಹಿಳೆಯಷ್ಟು ಸಹನೆ ಯಾರಲ್ಲಿಯೂ

ಇರಲಿಕ್ಕಿಲ್ಲ. ಯಾವುದೇ ಅಪಾಯವಿರಲಿ ಅಥವಾ ದುರಂತವೇ ಇರಲಿ, ಮಹಿಳೆಯೇ ಮೊದಲು ಬಲಿಪಶು. ಕೋಮು-ಗಲಭೆ ಹಾಗೂ ಯುದ್ಧದಿಂದ ಯಾರಿಗೆ ಏನೇ ಲಾಭ-ನಷ್ಟವಾದರೂ, ಮಹಿಳೆ ದುಃಖಕ್ಕೆ ಆಣಿಯಾಗುವುದಂತೂ ಖಂಡಿತ.

ಇತ್ತೀಚಿನ ಗುಜರಾತ್ ಹತ್ಯಾಕಾಂಡದಲ್ಲಿ, ಮಹಿಳೆಯರೇ ಹೆಚ್ಚಿನ ಸಂಖ್ಯೆಯಲ್ಲಿ ಸಾವಿಗೀಡಾದರೆಂದು ತಿಳಿಯಲು ಅಚ್ಚರಿಪಡಬೇಕಾಗಿಲ್ಲ. ಮತಾಂಧ ಮನಸ್ಸಿನವರು ಹಾಗು ಗಲಭೆಕೋರರು ಮನೆ ದೋಚಿ ಸುಡುವುದಲ್ಲದೇ ಕಂಡ - ಕಂಡ ಮಹಿಳೆಯರ ಮೇಲೆ ರಸ್ತೆರಸ್ತೆಗಳಲ್ಲಿ ಅತ್ಯಾಚಾರವೆಸಗಿದರು. ಇದಕ್ಕೆ ಯಾರೊಬ್ಬರ ತಡೆಯಾಜ್ಞೆಯು ಬರಲಿಲ್ಲ. ಪ್ರತಿಕ್ರಿಯೆಯು ಕಾಣಲಿಲ್ಲ. ಮತಾಂಧರ ಗುಂಪು ಯಾವ ಮಟ್ಟದ ನೀಚತನಕ್ಕೆ ಹೋಯಿತೆಂದರೆ, ಈ ಮಹಿಳೆ ನಮ್ಮ ಜಾತಿಯವಳಲ್ಲ, ಅನ್ಯಧರ್ಮದವಳೆಂದು, ಗರ್ಭಿಣಿಯ ಭ್ರೂಣವನ್ನು ತ್ರಿಶೂಲದಿಂದ ಚುಚ್ಚಿ ಅದನ್ನ ಮೇಲೆಸೆಯುತ್ತ ಕೇಕೆ ಹಾಕಿತು. ನಂತರ ಅವಳನ್ನು ಬೆಂಕಿಗೆ ಆಹುತಿಯಾಗಿಸಿದರು. ಪುರುಷ ತಾನು ಮಾಡಿದ್ದೇ ಶ್ರೇಷ್ಠವೆಂದು ನಡೆಯಿಸಿಕೊಳ್ಳುತ್ತಿರುವ ಸಮಾಜದಲ್ಲಿ ಮಹಿಳೆ ಇದ್ದೂ ಸತ್ತಂತೆ. ಅವಳು 'ಅಬಲೆ' ಎಂಬ ಏಕಮೇವ ಕಾರಣದಿಂದಾಗಿ, ತನ್ನ ಬಲಾಢ್ಯವನ್ನು ಪ್ರದರ್ಶಿಸಿ ಅವಳನ್ನು ತನ್ನ ಅಡಿಯಲ್ಲಿ ಕಾಯ್ದುಕೊಳ್ಳಲು ಬಯಸುತ್ತಿದ್ದಾನೆ.

ಇನ್ನು, ಯುದ್ಧಗಳಂತೂ, ಮಾನವಜಗತ್ತಿನ ವಿನಾಶಕ್ಕೆ ಮುನ್ನುಡಿಯಾಗಿವೆ. ಸರ್ಕಾರ ಮನಬಂದಂತೆ, ಯುದ್ಧಕ್ಕೆ ಕರೆ ನೀಡಿದರೆ ಸಾಕು, ಸೈನಿಕರು ಸಜ್ಜಾಗುತ್ತಾರೆ. ಯುದ್ಧವೂ ನಡೆಯುತ್ತೆ ಅದೂ ಭೀಕರವಾಗಿ. ಮತ್ತದೇ ಸಾವು-ನೋವು. ಆದರೆ, ಈ ಸಾವು-ನೋವಿನಲ್ಲಿ ತಾಯಿ ತನ್ನ ಮಗನನ್ನ, ಹೆಂಡತಿ ಗಂಡನನ್ನು ಕಳೆದುಕೊಂಡಿರುತ್ತಾಳೆ. ಅವರ ದುಃಖ ಸಂತಾಪಕ್ಕೆ ಬೆಲೆಯೇ ಇಲ್ಲ. ಸರ್ಕಾರ, ಇರುವ ಅಲ್ಪ-ಸ್ವಲ್ಪ ಹಣವನ್ನು 'ಪರಿಹಾರವೆಂದು ಕೊಡುತ್ತದೆ. ಹುತಾತ್ಮರ ಜೀವಕ್ಕೆ ಬೆಲೆ ಕಟ್ಟುತ್ತೆ. ಆದರೆ, ತಾಯಿ-ಮಗನ ಪ್ರೀತಿ ಮಮತೆ, ಗಂಡ-ಹೆಂಡತಿಯ ಬಾಂಧವ್ಯ ಮರಳಿ ಕೊಡುವುದೇ? ಹಲವು ಸಲ, ಇಂತಹ ಘಟನೆಗಳಿಂದ ಕುಟುಂಬ ಕಷ್ಟಕ್ಕೆ ಸಿಲುಕಿಕೊಂಡರೆ, ಮಹಿಳೆ ಏಕೈಕ ಆಧಾರಸ್ತಂಭವಾಗುತ್ತಾಳೆ.

ಮಹಿಳೆಯನ್ನು ನೋಡಲಾಗುತ್ತಿರುವ ದೃಷ್ಟಿಕೋನ ಕೀಳರಿಮೆಯಲ್ಲಿ ಕಾಣಲಾಗುತ್ತಿದೆ. ಕೇವಲ ಜೀವ ಇರುವಂತಹ ವಸ್ತು ಎಂಬ ಭಾವನೆ. ಅವಳ ಮೇಲೆ ನಡೆಯುತ್ತಿರುವ ಲೈಂಗಿಕ ಶೋಷಣೆ. ಸ್ವಾತಂತ್ರ್ಯ ಹಾಗೂ ಅವಕಾಶಗಳಿಲ್ಲದ ವಾತಾವರಣ.

ಇವೆಲ್ಲಗಳನ್ನು ದಿಕ್ಕರಿಸಿ, ಅವಳಿಗೆ ಬಾಳುವ ಹಕ್ಕಿದೆ, ತನ್ನದೇ ಆದ ಅಸ್ತಿತ್ವ ಇದೆಯೆಂದು ತೋರಿಸುವುದು ಅತ್ಯಗತ್ಯವಾಗಿದೆ.

'ಭಾರತ' - ಮಹಿಳೆಗೆ ಹೆಚ್ಚಿನ ಗೌರವ ನೀಡುವ ದೇಶ. ಅವಳಿಗೆ 'ದೇವಿ'ಯೊಂದಿಗೆ ಹೋಲಿಕೆ. ಮಾತೆ ಮಾನ್ಯಳಾದವಳು, ಕುಟುಂಬಕ್ಕೆ ಆಧಾರಸ್ತಂಭವೆಂದೇ ಗುರುತು. ಮಕ್ಕಳಿಗೆ ತಾಯಿ - ಸಹೋದರಿಗೆ ಅಕ್ಕ-ತಂಗಿ, ಗಂಡನಿಗೆ ಹೆಂಡತಿ - ಹೀಗೆ ಹಲವಾರು ಪಾತ್ರ ಅವಳಿಗೆ. ಇವೆಲ್ಲವೂ ಮಹಿಳೆಗೆ ನೀಡಲಾಗಿರುವ ಸ್ಥಾನಮಾನ. ಇದು ಒಂದು ಸಂಸ್ಕೃತಿ ಸಹ.

ಇವುಗಳಷ್ಟೇ ಅಲ್ಲ, ಇದಕ್ಕಿಂತಲೂ ಮೀರಿ ಬೆಳೆಯುವ ಶಕ್ತಿ ಮಹಿಳೆಗೆ ಇದೆ. ಇದಕ್ಕೆ ಎಲ್ಲರ, ಎಲ್ಲ ರೀತಿಯ ಪ್ರೋತ್ಸಾಹ ಅತ್ಯವಶ್ಯ.

## ಸೆಗಣಿ - ಚಿನ್ನದ ಗಣಿ

ಮನೆಯಲ್ಲಿ ಓದು, ಪಾಠ ಕಲಿಯದ ಮಕ್ಕಳನ್ನು ಸಾಮಾನ್ಯವಾಗಿ ಬಯ್ಯುವುದು ಹೀಗೆ - ಹುಡುಗನಾಗಿದ್ದರೆ, "ನಿನಗೆ ಓದು ಯಾಕೆ? ಹೋಗಿ ಎಮ್ಮೆ ಕಾಯಕ್ಕೆ ಹೋಗು". ಅದೇ ಹುಡುಗಿಯಾಗಿದ್ದರೆ, "ನಿನಗ್ಯಾಕೆ ಓದು, ಸೆಗಣಿ ಬಾಚಕ್ಕೆ ಹೋಗು!". ಎನ್ನುವುದು ವಾಡಿಕೆ. ಈ ಬಯ್ಗಳ ಹಿಂದೆ ಓದಿನ ಪ್ರಾಮುಖ್ಯತೆಯನ್ನು ಒತ್ತಿ ಹೇಳುವುದರ ಜೊತೆಗೆ ಎಮ್ಮೆ ಕಾಯುವುದು, ಸೆಗಣಿ ಬಾಚುವುದು ಮುಂತಾದ ಕೆಲಸಗಳು ತುಚ್ಛ ಕೆಲಸಗಳೆಂಬ ಧ್ವನಿಯಂತೂ ಪ್ರಕಟವಾಗುತ್ತದೆ. ಆದರೆ ಪತ್ರಕರ್ತ ಶ್ರೀ ಸಾಯಿನಾಥ್‌ರವರು ಈ ಸಗಣಿ ಮತ್ತು ಅದರ ಬೆರಣಿ ಹೇಗೆ ಚಿನ್ನದ ಗಣಿಗಳಾಗಿವೆ ಎಂಬುದನ್ನು ವಿಶೇಷವಾಗಿ ಒತ್ತಿ ಹೇಳುತ್ತಾರೆ :

ಬಿಹಾರದಲ್ಲಿ ಹೆಂಗಸರು ಸೆಗಣಿ ತಟ್ಟಿ ಬೆರಣಿ ಮಾಡುವ ಕಾಯಕದಿಂದ ದೇಶದ ಆರ್ಥಿಕತೆಗೆ ಅಪಾರ ಆದಾಯ ಸಿಗುತ್ತದೆ. ಆದರೆ ಇದು ಅಧಿಕೃತವಾಗಿ ದಾಖಲಾಗುತ್ತಿಲ್ಲ; ಎನ್ನುವುದೇ ಖೇದದ ಸಂಗತಿ. ಲಕ್ಷಾಂತರ ಮನೆಗಳು ಬೆರಣಿ ಬಿಟ್ಟು ಇತರ ಉರುವಲು ಬಳಸಲು ಆರಂಭಿಸಿದರೆ ಆದರಿಂದ ಆಗುವ ಅನಾಹುತ ಊಹಿಸಲಸಾಧ್ಯ. ಭಾರತ ದೇಶವು ಪೆಟ್ರೋಲ್ ಮತ್ತು ಪೆಟ್ರೋಲಿಯಂ ಉತ್ಪನ್ನಗಳ ಆಮದಿಗೆ ಖರ್ಚು ಮಾಡುವಷ್ಟು ವಿದೇಶಿ ವಿನಿಮಯವನ್ನು ಬೇರಾವುದೇ ಐಟಂಗೆ ವಿನಿಯೋಗಿಸುವುದಿಲ್ಲ. 1999-2000ರಲ್ಲಿ ಈ ಮೊತ್ತ 47,421 ಕೋಟಿ ರೂಪಾಯಿ / 10.5 ಬಿಲಿಯನ್ ಅಮೆರಿಕನ್ ಡಾಲರ್. ಸೆಗಣಿ ಇಂಧನ ಮಾತ್ರವಲ್ಲ, ಕ್ರಿಮಿನಾಶಕವಾಗಿ ಹಾಗೂ ಇತರ ಬಳಕೆಯಲ್ಲೂ ಉಪಯುಕ್ತ. ಸೆಗಣಿ ಸಂಗ್ರಹಿಸುವುದು ಕೂಡ ಮಹಿಳೆಯ ಕೆಲಸವೇ! ಸೆಗಣಿ ಸ್ಟಾಕ್ ಎಕ್ಸ್‌ಛೇಂಜಿನಲ್ಲಿ ರಿಜಿಸ್ಟರ್ ಆಗಿಲ್ಲದಿರುವುದರಿಂದ ಮುಖ್ಯವಾಹಿನಿಯ ಆರ್ಥಿಕ ತಜ್ಞರು ಇದರ ಮಹತ್ವವನ್ನು ಅರಿತಿಲ್ಲ, ಸೆಗಣಿ ಸಂಗ್ರಹಿಸುವ ಶ್ರಮವನ್ನೂ ಗುರುತಿಸುವುದೂ ಇಲ್ಲ.

# ''ಜಾತ್ರೆಯಲ್ಲಿ ಶಿವ'' - ಕೈಗೆ ಸಿಕ್ಕಾಗ

- ಕವಿತಾ ರೈ ಬಿ. ಆರ್.

'ಹೊಳೆ ಮಗಳು' 'ಚಂದ್ರನನ್ನು ಕರೆಯಿರಿ ಭೂಮಿಗೆ' ಎಂದು ಹೇಳುವ ಮೊದಲೇ 'ನಾ ಬರುತ್ತೇನೆ ಕೇಳು' ಎಂದು ಒಂಟಿಯಾಗಿ ಕನ್ನಡದ ಹೂ ಮನಸ್ಸುಗಳ ಕದ ತಟ್ಟಲು ತೊಡಗಿದ್ದೆಲ್ಲ ಫಾಸ್ಟ್ ಆಗಿ ರೀವೈಂಡ್ ಆದದ್ದು ಮಾನ್ಯ ಸಬಿಹಾ ಮೇಡಂನಿಂದ 'ಜಾತ್ರೆಯಲ್ಲಿ ಶಿವ' ಕೈಗೆ ಸಿಕ್ಕಿ.

*ಸಾಕ್ಷಾತ್ ಶಿವ !! ನನ್ನು ನೋಡಿ,*
*ಬಿಟ್ಟ ಬಾಯಿ ಬಿಟ್ಟಂತೆಯೇ*
*ನೆಟ್ಟ ಕಣ್ಣು ನೆಟ್ಟಂತೆಯೇ*
*ಎರಡೂ ಕೈ ಜೋಡಿಸಿ*
*ಮೈದುಂಬಿ ನುಡಿ ಬಿಟ್ಟೆ...*

ಸವಿತಾ ನಾಗಭೂಷಣ ಅವರ ಅನುಭವವನ್ನು ನನ್ನದು ಎಂದು ಮಂಗಳೂರಿನ ಬಲ್ಮಠದಲ್ಲಿ 'ಮಾರ್ನಮಿ'ಗೆ ಕಂಡ 'ವೇಷಧಾರಿ' ಶಿವನನ್ನು ಸ್ಮರಿಸಿಕೊಳ್ಳುವುದೆಂದರೆ ಕಣ್ಣ ಮುಂದಿರುವುದೇ ಕವನ ಸಾಲುಗಳು ವೇಷಧಾರಿ ಶಿವನೇ,

*ಮೆಲ್ಲನ ಬಳಿಸಾರಿ ಗೋಣ ಬಗ್ಗಿಸಿ*
*ಮಗ ಹಸಿದಿದ್ದಾನೆ*
*ಹೆಂಡತಿಗೆ ಕಾಯಿಲೆ ಅಂದ*
*ಬಾಡಿದ ಮುಖ, ಬಸಿದಿತ್ತು ದುಃಖ*
*ಗಣಪ ಹಸಿದಿದ್ದಾನೆ*
*ಗಿರಿಜೆಗೆ ಕಾಯಿಲೆ...*
*ಹೆಂಡತಿ - ಮಕ್ಕಳಿಗಾಗಿ*
*ಶಿವನಲ್ಲದೆ ಭವಿ ಆಳುವನೆ?!*

ಹಾಗೆ ನೋಡಿದರೆ, ಶಿವನ ಮೇಲಿನ ಅಭಿಮಾನಕ್ಕಿಂತ, ಚಂದ್ರನ ಪ್ರೀತಿ ಒಂದು ಕೈಮುಗಿಲು. 'ನಾನೂ ಮಗುವಾಗಿದ್ದಾಗ ಮೊಗ್ಗಿನಂತಹ ಬೆರಳುಗಳನ್ನು ಮಡಿಸಿ ಅರಳಿಸಿ ಚಂದ್ರನನ್ನು ಕರೆದಿದ್ದೆ ಭೂಮಿಗೆ (1991) ನೀವೂ 'ಚಂದ್ರನನ್ನು ಕರೆಯಿಸಿ ಭೂಮಿಗೆ' ಎಂದು ಆಪ್ತವಾಗಿ ಕರೆಕೊಟ್ಟ ಸವಿತಾ ನಾಗಭೂಷಣ 'ಜಾತ್ರೆಯಲ್ಲಿ ಶಿವ'ನೊಳಗೆ ಎಲ್ಲರಿಗೂ ಕೇಳುವಂತೆ ಪಿಸುಗುಟ್ಟಿದ್ದಾರೆ;

*ಯಾವ ಲೋಕದಲ್ಲಿ, ಯಾರ ಎರಕದಲ್ಲಿ*
*ರೂಪುಗೊಂಡವನೋ ಏನೋ...*
*ಯಾವ ಕಾಲದವನೋ ಏನವನ ಜಾತಿ?*
*ಮಾತಿನ ಹಂಗಿಲ್ಲದೇ ನನ್ನನ್ನು ಮುಟ್ಟಿಹನು*
*ಹೇಳಿ ಹೇಗೆ ಪ್ರೀತಿಸದೆ ಇರಲಿ ಚಂದ್ರನನ್ನು*

ಹೀಗೆ ಹೇಳುವಾಗಲೂ ತಿಂಗಳಿಗೆ ಒಂದಷ್ಟು ದಿನ 'ಕಿಟಕಿಯಲ್ಲಿ ಚಂದ್ರ' ಇಣುಕಿ ಬಿಟ್ಟರೆ ಎದೆ ಜೋರಾಗಿ ಬಡಿದು ಕೊಳ್ಳುತ್ತದೆ.

*ಯಾಕೆ ಬಂದೆ*
*ಯಾಕೆ ನಿಂದೆ*
*ಕಿಟಕಿಯಲ್ಲಿ ಚಂದಿರ*
*ಪಕ್ಕದಲ್ಲಿ ಗಂಡನಿರುವ*
*ತೊಟ್ಟಿಲಲ್ಲಿ ಕಂದನಿರುವ*
*ಅಕ್ಕ ಪಕ್ಕ ನೋಡಿಯಾರು*
*ನೂರು ಕತೆಯ ಕಟ್ಟಿಯಾರು*
*ಹೋಗಿ ಬಿಡು ಚಂದಿರ.*

ಎಂದು ದಮ್ಮಯ್ಯ ಹಾಕುವ ಕವಯತ್ರಿ ಕೆಲವು ಸಲ ಅತೀ ನಿಷ್ಠುರತೆಯಿಂದ ಏನಾದರೂ ಹೇಳುವುದಿದ್ದರೆ :

*ಬುದ್ಧನನ್ನು ಉಳಿಸಿ*
*ಎಂದು ಯಾಕೆ*
*ಮೊರೆಯಿಡುತ್ತೀರಿ?*
*ನೀವೇ ಇತ್ತ*
*ಮದ್ದು ಗುಂಡು, ಫಿರಂಗಿಗಳು*
*ನೀವೇ ಇತ್ತ*
*ಕ್ಷಿಪಣಿ, ರಾಕೆಟ್ಟು, ಟ್ಯಾಂಕರುಗಳು*
*ನಿಮ್ಮವೇ*
*ತಂತ್ರ - ಮಂತ್ರಗಳು*
*ಅವರ ಪಾಪದಲ್ಲಿ*
*ನೀವೂ ಪಾಲುದಾರರು.*

ಕಟುವಾದರೂ, ಮೂಗಿಡಿದು ಇದನ್ನು ಕುಡಿದು ಬಿಟ್ಟರೆ ಖಂಡಿತ ಮುದ್ದಿನ ಗುಣ ತಿಳಿದೇ ತಿಳಿಯುತ್ತದೆ.

'ಜಾತ್ರೆಯಲ್ಲಿ ಶಿವ'ನೊಳಗೆ 'ನಿನ್ನ ನಂತರ...' 'ಬೆಕ್ಕು ಅಡ್ಡ ಹೋಯಿತು' 'ದುಃಖ' 'ಬಾಗು' 'ದೊಡ್ಡಮರ' 'ಬಾಳಸಂಜೆ' 'ಕೊಂಡ ಹಾಯುವಳು' 'ಎಂದೆಲ್ಲ ಒಂದಕ್ಕಿಂತ ಭಿನ್ನವಾದ 'ಬಹುಮುಖ - ಮುಖಿ' ವಿಚಾರಗಳ ಬಗ್ಗೆ ಹೇಳುವುದು ಅವರ ಅನುಭವದ ವ್ಯಾಪಕತೆಯನ್ನು ಸಾರ ರೂಪದಲ್ಲಿಟ್ಟ ಸಾಕ್ಷಿ, ಎಲ್ಲರ ಗ್ರಹಿಕೆಗೆ ದಕ್ಕಿ ಬಿಡುತ್ತವೆ ಎಂಬ ಕಾರಣಕ್ಕಾಗಿ 'ತಂಗಿ ಹುಟ್ಟಿದಳು' 'ನಾದಿನಿ ಬಂದು ಹೋದಳು' 'ಸಮಯವಿದೆಯೆ ಪಪ್ಪಾ' ಹೆಚ್ಚು ಹತ್ತಿರವಾಗುತ್ತದೆ. ಸಿಗಬೇಕಾದ್ದು ಸಿಗಲು - ಪಡೆಯಲು ಪುರುಷರಾಗಬೇಕಾಗಿಲ್ಲ ಎಂಬ ಧೋರಣೆಯ ಇಂತಹ ಕವನಗಳಲ್ಲಿ

ಸಮಾನತೆ ಮತ್ತು ವಿಭಿನ್ನತೆ (Equality and difference) ಯನ್ನು ಏಕ ಸಂದರ್ಭದಲ್ಲಿ ಚರ್ಚೆಗೆ ಎತ್ತಿಕೊಳ್ಳುವುದು ಹೆಚ್ಚು ಮುಖ್ಯವೆನಿಸುತ್ತದೆ.

'ಜಾತ್ರೆಯಲ್ಲಿ ಶಿವ' ನೊಡನೆ ' ಭುವನ ಸುಂದರಿ', 'ಜಾಗತೀಕರಣದ ಹೊಸಿಲಲ್ಲಿ ನಿಂತಿರುವ ರೈತನಿಗೊಂದು ಕಿವಿಮಾತು' 'ಚಿತೆಗೇರಲಿಲ್ಲ ಹೂವುಗಳು' ಪ್ರಚಲಿತ ವಿದ್ಯಮಾನಗಳ ವರ್ಣನೆಯೊಳಗೂ ಪಿತೃಸತ್ತೆಯು ನಿರ್ಮಿಸಿದ 'ಚೌಕಟ್ಟುಗಳನ್ನು' ಪರಿಷ್ಕರಿಸುವ, ಪುರುಷ ಪ್ರಾಧಾನ್ಯತೆಯ ಪರಿಪೂರ್ಣತೆನ್ನು ನಿರಕರಿಸುವ ಎಳೆಗಳನ್ನು ಗುರುತಿಸಬಹುದು. ಇಂತಹ ಕವನಗಳೊಳಗೆ ಒಡೆದು ತೋರುವ ಅಂಶ. 'ಸ್ತ್ರೀ - ಪರಿಸರ - 'ಸ್ತ್ರೀ - ಜೀವಪ್ರೇಮ'. 'ಸ್ತ್ರೀಯಾತ್ಮಕತೆಗೆ' 'ಲೈಂಗಿಕತೆಗೆ' ಸಂಬಂಧಿಸಿದ ಹೆಚ್ಚು ಸಂಕೀರ್ಣರೂಪದಲ್ಲಿ 'ಕವನಗಳನ್ನು ಕಟ್ಟುವ ಶಕ್ತಿ ಸವಿತಾ ಅವರ ಬರಹಗಳಲ್ಲಿ ಅಂತರ್ಗತವಾಗಿರುವ ಅಂಶ. ಯಾವುದೇ ಮೂಲದಿಂದ ದೇಹ ಕೇಂದ್ರಿತ ಪ್ರಜ್ಞೆಯ 'ಸ್ತ್ರೀಯಾತ್ಮಕತೆ'ಯನ್ನು ನಿರ್ಣಯಿಸುವಲ್ಲಿ ಇವರಿಗೆ ಮುಖ್ಯವಾಗುವುದು 'ಸ್ತ್ರೀತ್ವ'ವೆಂಬುದು ಒಂದು ಸ್ಥಿತಿ (Position) ಹಾಗಾಗಿ ಇವರ ಹೆಚ್ಚಿನ ಕವನಗಳು ಅಂತಿಮವಾಗಿ 'ಎಲ್ಲವನ್ನು ಒಳಗೊಂಡ' 'ಏನು ಇಲ್ಲದಿರುವ' 'ಪ್ರತೀಕಾತ್ಮಕ ರಚನೆ' (Phallus Structure) ಗಳಾಗಿ ತೋರುತ್ತವೆ.

ಇಷ್ಟೆಲ್ಲ ಹೇಳಿ 'ಮತ್ತೆ ಹುಟ್ಟುವುದಾದರೆ...'

*ಮತ್ತೆ ಹುಟ್ಟುವುದಾದರೆ*
*ಈ ನೆಲವೇ ಇರಲಿ*
*ಹುಟ್ಟಿದ ಮೇಲೆನ್ನ ನುಡಿಯು*
*ಕನ್ನಡವೇ ಆಗಿರಲಿ*
*ಹಿಮಾಲಯವು ಮುಡಿಯಲ್ಲಿ*
*ಸಹ್ಯಾದ್ರಿಯ ಅಡಿಯಲ್ಲಿ*
*ಅಲ್ಲಲ್ಲಿಯೇ ಇರಲಿ*
*ಕಲ್ಲತ್ತೆಯ ಕಾಳಿ*
*ಶೃಂಗೇರಿಯ ಶಾರದೆಗೆ*
*ಹೂವು - ಕುಂಕುಮ ಕೊಡಲಿ*
*ದೂರದಲ್ಲೇಕೆ ಇರಬೇಕುದಂತಲಿ*
*ಶಿವಮೊಗ್ಗೆಗೇ ಬರಲಿ*

ಜಾತ್ರೆಯಲ್ಲಿ ಶಿವ
ಲೇಖಕಿ : ಸವಿತಾ ನಾಗಭೂಷಣ
ಪ್ರಕಾಶನ : ಅಕ್ಷರ ಪ್ರಕಾಶನ ಹೆಗ್ಗೋಡು,
ಸಾಗರ - 2002 ಬೆಲೆ : 50/-

## ವಿಷವೃತ್ತ

ಆರೋಗ್ಯ ಪಾಲನೆ ಕೊರತೆಗೆ ಹಲವಾರು ಕಾರಣಗಳಿವೆ. ಮಹಿಳೆಯ / ಪುರುಷನ ಬಡತನವು ಅಪೌಷ್ಟಿಕತೆಗೆ ಎಡೆ ಮಾಡಿಕೊಡುತ್ತದೆ. ಅಪೌಷ್ಟಿಕತೆಯ ದೀರ್ಘಕಾಲಿಕ ರೋಗಗಳಿಗೆ ಕಾರಣವಾಗುತ್ತದೆ. ಉತ್ಪಾದಕ ಶಕ್ತಿಯನ್ನು ಕುಂಠಿತಗೊಳಿಸುತ್ತದೆ. ಉತ್ಪಾದನೆಯ ಕುಂಠಿತವು ಅಸಡ್ಡೆಗೆ ಎಡೆಮಾಡಿಕೊಡುತ್ತದೆ. ಅಸಡ್ಡೆಯು ಶಿಕ್ಷಣದ ಕೊರೆತೆಗೆ ಮತ್ತು ಕಡಿಮೆ ಆದಾಯ ಗಳಿಸುವಿಕೆ ಉತ್ಪಾದಕ ಸಾಮರ್ಥ್ಯದ ಕೊರತೆಗೆ ಎಡೆ ಮಾಡಿಕೊಡುತ್ತದೆ. ಹೀಗೆಯೆ, ಕಳಪೆ ಆರೋಗ್ಯ ಹೆಚ್ಚು ಶಿಶು ಮರಣಕ್ಕೆ ದಾರಿಮಾಡಿಕೊಡುತ್ತದೆ.

## ಆತ್ಮಹತ್ಯೆಯಲ್ಲಿ ಕರ್ನಾಟಕಕ್ಕೆ 5ನೇ ಸ್ಥಾನ

ವಿಶ್ವದಾದ್ಯಂತ ಆತ್ಮಹತ್ಯೆ ಪ್ರಕರಣಗಳ ಸಂಖ್ಯೆಯಲ್ಲಿ ಭಾರತವು 5ನೇ ಸ್ಥಾನದಲ್ಲೂ, ಭಾರತದಲ್ಲಿ ಕರ್ನಾಟಕ ರಾಜ್ಯವೂ 5ನೇ ಸ್ಥಾನ ಪಡೆದಿದೆ. ಇದಕ್ಕೆ ಪ್ರಮುಖ ಕಾರಣಗಳಲ್ಲಿ ಕೌಟುಂಬಿಕ ಕಲಹ, ವರದಕ್ಷಿಣೆ ವಿವಾಹ, ಭಗ್ನ ಪ್ರೇಮ ಮತ್ತು ನಿರುದ್ಯೋಗಗಳಾಗಿವೆ. ಕರ್ನಾಟಕ ರಾಜ್ಯಧಾನಿಯಾದ ಬೆಂಗಳೂರು ಆತ್ಮಹತ್ಯೆ ಪ್ರಕರಣಗಳಲ್ಲಿ ರಾಷ್ಟ್ರದಲ್ಲೇ 1ನೇ ಸ್ಥಾನವನ್ನು ಪಡೆದಿರುವುದು ದುಃಖಕರ ವಿಷಯ. ಆತ್ಮಹತ್ಯೆ ಮಾಡಿಕೊಳ್ಳುವುವರಲ್ಲಿ ಅರ್ಧಕ್ಕಿಂತ ಹೆಚ್ಚು (ಶೇಕಡ 53) 15ರಿಂದ 29 ವರ್ಷದೊಳಗಿನವರು ಮತ್ತು 30 ರಿಂದ 49 ವರ್ಷದೊಳಗಿರುವವರಲ್ಲಿ ಶೇಕಡ 34 ಇರುವುದು ಈ ಆತ್ಮಹತ್ಯೆ ಮಾಡಿಕೊಳ್ಳುವವರಲ್ಲಿ ಶೇಕಡ 95 ಮಂದಿ ಮಧ್ಯಮ ವರ್ಗದ ಕುಟುಂಬಕ್ಕೆ ಸೇರಿದವರಾಗಿರುವುದು ಹಾಗೂ ಈ ಬಗ್ಗೆ ತ್ವರಿತವಾದ ಪರಿಹಾರ ಕಾರ್ಯಕ್ರಮಗಳನ್ನು ತೆಗೆದುಕೊಳ್ಳಬೇಕಾದ ಅವಶ್ಯಕತೆಯನ್ನು ಸೂಚಿಸುತ್ತದೆ.

## ನೆಮ್ಮದಿಯ ನಾಳೆಗಾಗಿ

ಹೊಸವರ್ಷದ ಮೊದಲ ದಿನ ಹೈದ್ರಾಬಾದ್‌ನಲ್ಲಿ ನಡೆದ ವಿಶೇಷ ಘಟನೆಯು ಇಡೀ ಜಗತ್ತಿನ ಗಮನ ಸೆಳೆಯಿತು. ಅದೇ ಏಷ್ಯನ್ ಸೋಷಿಯಲ್ ಫೋರಂನವರು ವ್ಯವಸ್ಥೆಗೊಳಿಸಿದ ಏಷ್ಯಾದ ಜನತೆಯ ಸಮಾವೇಶವಾಗಿತ್ತು. ಸುಮಾರು ಹತ್ತು ಸಾವಿರಕ್ಕೂ ಹೆಚ್ಚು ಸ್ತ್ರೀಪುರುಷರು ಏಷ್ಯಾಖಂಡದ ವಿವಿಧ ಮೂಲೆಗಳಿಂದ ತಮ್ಮ ಧ್ವನಿಯನ್ನು ಕೇಳಿಸಬೇಕೆಂಬ ಉತ್ಸಾಹದಿಂದ ಇಲ್ಲಿಗೆ ಬಂದಿದ್ದರು. ಜಾಗತೀಕರಣದ ವಿನಾಶಕಾರಿ ಪರಿಣಾಮವನ್ನು ಎಲ್ಲರಿಗೂ ಮನಮುಟ್ಟು ಮಾಡಿಕೊಡುತ್ತಲೇ ಪ್ರತಿಭಟನೆಯ ಧ್ವನಿಯನ್ನು ಜಗತ್ತಿನ ಹಿರಿಯಣ್ಣರಿಗೆ ಮನದಟ್ಟು ಮಾಡಿಕೊಡುವುದೂ ಈ ಸಮಾವೇಶದ ಮುಖ್ಯ ಗುರಿಯಾಗಿತ್ತು. ''ಜಾಗತೀಕರಣ, ಬಂಡವಾಳಶಾಹಿ ಮತ್ತು ಶೋಷಣೆಗೆ ಹೇಳಿ ಧಿಕ್ಕಾರ'' ಎನ್ನುವುದು ಸಮಾವೇಶದ ಮುಖ್ಯ ಧ್ವನಿಯಾಗಿತ್ತು. ಇದರ ಜೊತೆಗೆ ಸಮಾನತೆ ಮತ್ತು ಸಾಮಾಜಿಕ ನ್ಯಾಯವನ್ನು ಕುರಿತ ಬೇಡಿಕೆಗಳೂ ಇದ್ದವು.

ಜಾಗತೀಕರಣದಿಂದ ಭವಿಷ್ಯವೇ ಅಂಧಕಾರಮಯ--ವಾಗಿರುವಾಗ ಹೊಸವರ್ಷವನ್ನು ಈ ರೀತಿ ಆಚರಿಸುವುದು ಕೂಡ ಅರ್ಥಪೂರ್ಣವಾಗಿತ್ತು. ಈ ಸಮಾವೇಶಕ್ಕೆ ಪ್ರಧಾನಮಂತ್ರಿ, ಮುಖ್ಯಮಂತ್ರಿ ಕೊನೆಗೆ ಯಾವುದೇ ಫ್ಯಾಸಿಸ್ಟ್ ಶಕ್ತಿಗಳೂ ಆಮಂತ್ರಿತರಾಗಿರಲಿಲ್ಲ. ಇಲ್ಲಿ ಸೇರಿದ್ದ ಸುಮಾರು ಹತ್ತುಸಾವಿರ ಜನರೂ ವ್ಯವಸ್ಥೆಯನ್ನು ಸಂಪೂರ್ಣವಾಗಿ ಕಡೆಗಣಿಸಿದ್ದು ಎದ್ದು ಕಾಣುತ್ತಿತ್ತು. ಬಹುಶಃ ಅಧಿಕಾರಸ್ಥ ಜನರೂ ಈ ಸಮಾವೇಶದಲ್ಲಿ ಇಲ್ಲದಿದ್ದರಿಂದಲೇ ಏನೋ ಎಲ್ಲೂ ಪೋಲೀಸರಾಗಲಿ, ಯಾವುದೇ ಸೆಕ್ಯುರಿಟಿಯ ಸಿಬ್ಬಂದಿಗಳಾಗಲೀ ಕಂಡು ಬರುತ್ತಿರಲಿಲ್ಲ. ಅಲ್ಲಿ ನಡೆದ ಸಭೆ, ಚರ್ಚೆ, ಹಾಡು, ಕುಣಿತ - ಎಲ್ಲವೂ ವ್ಯವಸ್ಥಿತವಾಗಿ ಇರಬೇಕೆಂದೇನೂ ಇರಲಿಲ್ಲ. ಈ ಜನಜಾತ್ರೆಯಲ್ಲಿ ಸಾಮಾಜಿಕನ್ಯಾಯ ಪ್ರತಿಪಾದಿಸಬಂದವರು ಕುಣಿದರು, ಕುಪ್ಪಳಿಸಿದರು, ಹಾಡಿ, ಕೂಗಿ ಈಗಿನ ಅಂತರರಾಷ್ಟ್ರೀಯ ಸ್ಥಿತಿಗೆ ತಮ್ಮ ವಿರೋಧ ವ್ಯಕ್ತಪಡಿಸಿದರು. ವೇದಿಕೆಯ ಮೇಲೂ ಅತ್ಯಂತ ಶಕ್ತಿಯುತವಾದ ಧ್ವನಿಗಳು ಕೇಳಿಸಿದವು. ವಾಲ್ಡನ್ ಬೆಲೊ, ಅರುಣಾರಾಯ್, ಸಾಯಿನಾಥ್, ಅಶೋಕ ಮಿತ್ರ, ಮೇಧಾ ಪಾಟ್ಕರ್, ಪ್ರಭಾತ್ ಪಾಟ್ನಾಯಕ್ - ಮುಂತಾದವರು ಮಾತನಾಡಿ, ಮಾನವೀಯ ಅಂತಃಕರಣವಿರುವ ಹೊಸ ಜಗತ್ತಿನ ಸೃಷ್ಟಿಗೆ ಹೋರಾಡಲು ಕರೆಯಿತ್ತರು. ಜಾಗತೀಕರಣದ ಭಯಂಕರ ದಾಳಿಯಲ್ಲಿ ನುಚ್ಚು ನೂರಾದ ದಲಿತರು, ಆದಿವಾಸಿಗಳು, ವಿಕಲಾಂಗರು, ಬಡತನ, ದಾರಿದ್ರ್ಯಗಳಿಂದ ನೊಂದವರು ಭಾಗವಹಿಸಿದ ಹೋರಾಟಗಳಿಂದ ಸ್ಫೂರ್ತಿಪಡದ ಅಸಂಖ್ಯಾತ ಜನರು ಇಲ್ಲಿ ಸೇರಿದ್ದರು. ನಾಲ್ಕು ದಿನಗಳ ಕಾಲ ಈ ಸಮಾವೇಶ ನಡೆದು ಇಡೀ ವಿಶ್ವವೇ ಇಲ್ಲಿ ನಡೆದ ಚರ್ಚೆ, ಅಹವಾಲು, ಬೇಡಿಕೆ ಹಕ್ಕೊತ್ತಾಯಗಳಿಗೆ ಕಿವಿಕೊಡಬೇಕಾದ ಸನ್ನಿವೇಶವನ್ನು ಬಲವಂತವಾಗಿ ಸೃಷ್ಟಿಸಲಾಯಿತು.

ಹೈದ್ರಾಬಾದ್‌ನ ನಿಜಾಮ್ ಕಾಲೇಜಿನಲ್ಲಿ ನಡೆದ ಈ ಸಮಾವೇಶದಲ್ಲಿ ಜಾಗತೀಕರಣವನ್ನು ಪ್ರತಿಭಟಿಸುವ ರೊಚ್ಚು ಒಂದಲ್ಲ ಒಂದು ರೀತಿಯಲ್ಲಿ ಎಲ್ಲರಲ್ಲೂ ಮೂಡಿತ್ತು. ಅದಕ್ಕೆ ವಯಸ್ಸು, ಜಾತಿ, ಲಿಂಗ, ರಾಷ್ಟ್ರೀಯತೆಯ ಅಡ್ಡ ಬೇಲಿಗಳಿರಲಿಲ್ಲ. ಸಾಂಕೇತಿಕವಾಗಿ ಪ್ರತಿಭಟನೆಯ ಅಲೆ ಎಲ್ಲೆಲ್ಲೂ ಕಪ್ಪು ಬಣ್ಣಗಳಿಂದ ವಿಜೃಂಬಿಸಿತ್ತು ಬಹು ಸಂಖ್ಯೆಯಲಿ ಜನ ಕಪ್ಪು ಧರಿಸಿ ಇಲ್ಲಿ ಬಂದಿದ್ದು ಅವರ ಆಯ್ಕೆಯಾಗಿದ್ದರೆ, ಅವರೊಂದಿಗೆ ಬುರಖಾ ಧರಿಸಿದ ಹೈದರಾಬಾದ್‌ನ ಮಹಿಳೆಯರೂ ತಮ್ಮ ಧ್ವನಿಯನ್ನು ಸೇರಿಸಿದ್ದರು.

ಆಫ್‌ಘಾನಿಸ್ಥಾನದ ಕಾಬೂಲ್‌ನಿಂದ ಬಂದಿದ್ದ ಮರೀನಾ ನವಾಬಿಗೆ ಇದು ಭಾರತದ ಮೊದಲ ಭೇಟಿಯಾಗಿತ್ತು. ಶಾರೂಕ್‌ಖಾನ್ ಮತ್ತು ಹಿಂದಿ ಚಿತ್ರದ ಮೂಲಕವಷ್ಟೇ ಭಾರತವನ್ನು ಗ್ರಹಿಸಿದ್ದ ಮರೀನಾಗೆ ಈ ಸಮಾವೇಶದ ಅನುಭವ ಹೊಸ ವಿಶ್ವವನ್ನೇ ತೆರೆಯಿತು. ಆಫ್‌ಘಾನಿಸ್ಥಾನ 'ಏಕ್ಷನ್ ಏಡ್'ನಲ್ಲಿ ಕಾರ್ಯಕ್ರಮ ನಿರ್ವಾಹಕಳಾಗಿ ಕಾರ್ಯನಿರ್ವಹಿಸುತ್ತಿರುವ ಮರೀನಾ ತನ್ನ ಊರಿಗೆ ಹಿಂತಿರುಗಿದ ನಂತರ ಮಹಿಳಾ ಶಿಕ್ಷಣಕ್ಕೆ ಹೆಚ್ಚು ಆದ್ಯತೆ ಕೊಡುವುದಾಗಿ ಪಣತೊಟ್ಟಳು.

ಪ್ಯಾಲ್‌ಸ್ಟೈನ್‌ನ ರಾಣಾ ಇಸ್ರೇಲಿ ಆಕ್ರಮಣದ ಕಹಿ ಅನುಭವವನ್ನು ಹಂಚಿಕೊಂಡಳು. ಅಮೆರಿಕಾದಿಂದ ಬೆಂಬಲಿತ ಮತ್ತು ಪೋಷಿತ ಇಸ್ರೇಲಿ ಬಾಂಬುಗಳು ಮತ್ತು ಬುಲ್‌ಡೋಜರ್‌ಗಳು ಪ್ಯಾಲೆಸ್ಟೈನ್‌ನಲ್ಲಿ ಬದುಕನ್ನು ನರಕವಾಗಿಸಿವೆ. ಈ ಬದುಕಿನ ಹೋರಾಟವೇ ಮುಖ್ಯವಾದಾಗ ಮಹಿಳೆಯರು ತಮ್ಮದೇ ಸಮಸ್ಯೆಗಳ ಬಗ್ಗೆ ಹೇಗೆ ಧ್ವನಿಯೆತ್ತಲು ಸಾಧ್ಯ? ತಮ್ಮ ಜನರ ಉಳಿವಿಗಾಗಿನ ದೊಡ್ಡ ಹೋರಾಟದಲ್ಲಿ ದಿನ ನಿತ್ಯ ಎದುರಿಸಿಬೇಕಾಗಿರುವ ಮನೆಯ ಒಳಗಿನ ಮತ್ತು ಹೊರಗಿನ ಕ್ರೌರ್ಯದ ವಿರುದ್ಧ ಧ್ವನಿ ಎತ್ತಲು, ಹೋರಾಡಲು ಅವಕಾಶವೇ ಇಲ್ಲವಾಗಿದೆ, ಎನ್ನುವುದು ಅವಳ ಕೊರಗು.

ಬಾಗ್ದಾದ್‌ನಿಂದ ಬಂದಿದ್ದ ಅರ್ಥಶಾಸ್ತ್ರಜ್ಞೆ ಇರಾಕಿ

ಮಹಿಳೆಯರ ಜನರಲ್ ಫೆಡರೇಷನ್‌ನ್ನು ಪ್ರತಿನಿಧಿಸಿದವಳು. ಅವಳು ಈ ವೇದಿಕೆಯ ಮಾತನಾಡುತ್ತಾ ಇರಾಕಿ ಮಹಿಳೆಯರ ಸ್ಥಿತಿಗತಿಗಳನ್ನು ಬಿಚ್ಚಿಟ್ಟಳು. ಇರಾಕಿ ಮಹಿಳೆಯರು ತಮ್ಮ ಪುರುಷಸಂಗಾತಿಗಳೊಂದಿಗೆ ಸಮಸಮವಾಗಿ ಹೋರಾಟದಲ್ಲಿ ಪಾಲ್ಗೊಳ್ಳುತ್ತಾರೆಂಬ ವಿಷಯ ಭಾರತದಲ್ಲಿ ಕೆಲವರಿಗೆ ಗೊತ್ತಿರಬಹುದು. ಆದರೆ ಪಶ್ಚಿಮದವರು ಇದನ್ನು ಗುರುತಿಸುವುದೂ ಇಲ್ಲ. ಯುದ್ಧ ಮತ್ತು ನಿಷೇಧಗಳ ವಿರುದ್ಧ ಹೋರಾಡುವುದರಲ್ಲಿ ಸಮಸಮವಾಗಿ ಹೋರಾಡಿದ ಇರಾಕಿ ಮಹಿಳೆಯರಿಗೆ ಮಹಿಳೆಯರದೇ ಆದ ಸಮಸ್ಯೆಗಳಿದ್ದರೂ ಅವುಗಳ ಬಗ್ಗೆ ಚಿಂತಿಸಲು ಸಮಯವಿಲ್ಲ - ಹೀಗೆ ಆಫ್‌ಘಾನಿಸ್ಥಾನ, ಪ್ಯಾಲೆಸ್ಟೈನ್ ಮತ್ತು ಇರಾಕ್ - ಮಹಿಳೆಯರ ಸಮಸ್ಯೆಗಳಲ್ಲಿ ಸಮಾನತೆಯೂ ಇದೆ, ವೈರುಧ್ಯಗಳೂ ಇದೆ.

ಈ ಇಡೀ ಸಮಾವೇಶದಲ್ಲಿ 'ಜನತೆಯ ಧ್ವನಿಗಳು' ಎಂಬ ಗೋಷ್ಠಿಯೊಂದಿತ್ತು. ಆ ಗೋಷ್ಠಿಯಲ್ಲಿ ವೈಯಕ್ತಿಕ ಬದುಕಿನಲ್ಲಿ ನೋವುಂಡ ಜನ ತಮ್ಮ ದುಃಖವನ್ನು ಜನತಾ ನ್ಯಾಯಾಲಯದ ಮುಂದೆ ಹೇಳಿಕೊಂಡರು. ಭಾರತೀಯರ ಧ್ವನಿಯೂ ಇಲ್ಲಿ ಕೇಳಿಬಂತು. ಪುದುಕೊಟ್ಟೈನ ತಮಿಳು ದಲಿತ, ನರ್ಮದಾ ಪ್ರಾಂತ್ಯದ ಆದಿವಾಸಿ ಮಹಿಳೆ, ಹದಿನಾಲ್ಕು ವಯಸ್ಸಿನ ಕಾಶ್ಮೀರದ ಅನಾಥ, ಇನ್ನು ಹಲವಾರು ಮಂದಿ ತಮ್ಮ ನೋವಿನ ಕತೆಗಳನ್ನು ಬಿಚ್ಚಿಕೊಂಡರು. ರಾಜಸ್ಥಾನದಲ್ಲಿ ದಲಿತನೊಬ್ಬನು ಸಾಕಷ್ಟು ಹೊಡೆತ ಬಡಿತಗಳ ಪರಿಣಾಮವಾಗಿ ಎರಡೂ ಕಾಲು ಕಳೆದುಕೊಂಡಾಗಿತ್ತು. ಅವನ ಹೆಂಡತಿ ಮೋಹಿನಿದೇವಿಯ ಮೇಲೆ ಊರಿನ ವರಿಷ್ಠರು ಗಂಡನ ಮುಂದೆ ಸಾಮೂಹಿಕ ಅತ್ಯಾಚಾರ ನಡೆಸಿ ಬುದ್ಧಿ ಕಲಿಸುವುದಾಗಿ ಬೆದರಿಕೆ ಹಾಕಿದ್ದರು. ರಾಜಸ್ಥಾನ ಮತ್ತು ಬಿಹಾರದಲ್ಲಿ ಇದು ನಿತ್ಯಕತೆ.

ಒಟ್ಟಿನಲ್ಲಿ ನಾಲ್ಕು ದಿನಗಳ ಈ ಸಮಾವೇಶ ನೆಮ್ಮದಿಯ ನಾಳೆಗಾಗಿ ಜನಸಮುದಾಯದ ಹೋರಾಟದ ಸಂಕಲ್ಪವನ್ನು ಬಿಂಬಿಸಿತ್ತು. ಅದರಲ್ಲಿ ಮಹಿಳೆಯರೂ ಸಾಕಷ್ಟು ಸಂಖ್ಯೆಯಲ್ಲಿದ್ದರು. ಅರ್ಜೆಂಟೈನಾದ ತಾಯಿಯೊಬ್ಬಳು ಕಳೆದುಕೊಂಡ ತನ್ನ ಮಗನನ್ನು ಕುರಿತು ಹೇಳಿದ ಮಾತುಗಳು ಇಡೀ ಸಮಾವೇಶದ ಧ್ವನಿಯನ್ನು ಗಟ್ಟಿಯಾಗಿ ಪ್ರತಿಧ್ವನಿಸಿತು. ''ನಮ್ಮ ಮಕ್ಕಳು ಕಾಣೆಯಾಗಿದ್ದಾರೆ. ಅವರು ನ್ಯಾಯಕ್ಕಾಗಿ ಹೋರಾಡುತ್ತಾ ಕಾಣೆಯಾಗಿದ್ದಾರೆ. ಹೊಸಜಗತ್ತಿಗಾಗಿ ಅವರು ನಡೆಸಿದ ಹೋರಾಟದ ಕಿಚ್ಚನ್ನು ನಂದದಂತೆ ನಾವು ಎತ್ತಿಹಿಡಿದು ಮುಂದೆ ಸಾಗೋಣ. ಅವರ ಹೋರಾಟ ವ್ಯರ್ಥವಲ್ಲ, ಅವರ ಜೀವ ಪವಿತ್ರಕಾರ್ಯದ ಸಾಧನೆಯಲ್ಲಿ ನಂದಿದೆ. ಹೊಸ ಜಗತ್ತಿನ ನಿರ್ಮಾಣದತ್ತ ನಾವೆಲ್ಲ ಸಾಗೋಣ''.

o

RNI No. 45577/88

"Achala" 108, Skyline Surabhi,
14 - P , Vidyapeeta Road,
BSK III Stage,
Bangalore - 560 085

To :

Smt/Sri

CPMG/KA/BG-8/2003
Book-Post/News Letter